# ಯಂತ್ರೋದ್ಧಾರಕರು

ಮತ್ತು

# ನವವೃಂದಾವನ




ಲೇಖಕರು ಮತ್ತು ಪ್ರಕಾಶಕರು

**ಕೀ॥ ಶೇ॥ ಪಿ. ವಿಷ್ಣು ತೀರ್ಥ 'ನವವೃಂದಾವನ'**

**931, 2ನೇ ಮುಖ್ಯಬೀದಿ, 4ನೇ ಬ್ಲಾಕ್, ರಾಜಾಜಿನಗರ,**

**ಬೆಂಗಳೂರು - 560 010. ಫೋನ್ ನಂ.: 23143290**

# ಯಂತ್ರೋದ್ಧಾರಕರು
## ಮತ್ತು
# ನವವೃಂದಾವನ


ಹಂಪೆಯಲ್ಲಿ ಚಕ್ರತೀರ್ಥ ದಡದ ಮೇಲಿರುವ ಶ್ರೀ ವ್ಯಾಸರಾಜತೀರ್ಥ ಪ್ರತಿಷ್ಠಿತ (ಕ್ರಿ.ಶ. 1500) ಯಂತ್ರೋದ್ಧಾರಕ ಪ್ರಾಣ ದೇವರು


ಆನೆಗೊಂದಿಯ ನವವೃಂದಾವನದಲ್ಲಿರುವ ಶ್ರೀ ಪದ್ಮನಾಭತೀರ್ಥರು


ಹಂಪೆಯಲ್ಲಿ ತುಂಗಭದ್ರಾ ನದೀ ಮಧ್ಯದಲ್ಲಿ ಒಂದು ಬಂಡೆಯ ಮೇಲಿರುವ ಶ್ರೀ ನರಹರಿತೀರ್ಥರು

ಆನೆಗೊಂದಿಯಲ್ಲಿರುವ ನವವೃಂದಾವನದ ನೋಟ


ವೃಂದಾವನಗಳ ಹೆಸರುಗಳು : (1) ಶ್ರೀ ಪದ್ಮನಾಭತೀರ್ಥರು (2) ಶ್ರೀ ರವೀಂದ್ರ ತೀರ್ಥರು (3) ಶ್ರೀ ವಾಗೀಶ ತೀರ್ಥರು (4) ಶ್ರೀ ವ್ಯಾಸ ರಾಯರು (5) ಶ್ರೀ ರಘುವರ್ಯರು (6) ಶ್ರೀ ಶ್ರೀನಿವಾಸ ತೀರ್ಥರು (7) ಶ್ರೀ ರಾಮತೀರ್ಥರು (8) ಶ್ರೀ ಸುಧೀಂದ್ರ ತೀರ್ಥರು (9) ಶ್ರೀ ಗೋವಿಂದ ಒಡೆಯರು

**ಲೇಖಕರು ಮತ್ತು ಪ್ರಕಾಶಕರು**
**ಕೀ॥ ಶೇ॥ ಪಿ. ವಿಷ್ಣುತೀರ್ಥ 'ನವವೃಂದಾವನ'**
**931, 2ನೇ ಮುಖ್ಯಬೀದಿ, 4ನೇ ಬ್ಲಾಕ್, ರಾಜಾಜಿನಗರ,**
**ಬೆಂಗಳೂರು - 560 010. ಫೋನ್ ನಂ.: 23143290**

*Yantroddharaka and Navavrindavana* (in Kannada) written and published by P. Vishnu Thirtha

ಎರಡನೆಯ ಮುದ್ರಣ : ನವೆಂಬರ್ ೧೯೯೩
ಮೂರನೆಯ ಮುದ್ರಣ : ನವೆಂಬರ್ / ಡಿಸೆಂಬರ್ 2008



**ಬೆಲೆ : ರೂ. 15/-** (ಹದಿನೈದು ರೂಪಾಯಿಗಳು ಮಾತ್ರ)

ಮುದ್ರಕರು :
**ಮೆ|| ಹೇಮಂತ್ ಪ್ರಿಂಟರ್ಸ್, ರಾಜಾಜಿನಗರ, ಬೆಂಗಳೂರು - 10.**

# ಪ್ರಸ್ತಾವನೆ

ನಾನು ಬರೆದ 'ಹಂಪೆ, ವಿಜಯನಗರ ಕಿಷ್ಕಿಂಧಾಗಳ ಮಾರ್ಗದ ಕೈಪಿಡಿ'ಯನ್ನು ನೋಡಿದ ಅನೇಕರು ಯಂತ್ರೋದ್ಧಾರಕರ ಬಗ್ಗೆಯೂ ನವವೃಂದಾವನಗಳ ಬಗ್ಗೆಯೂ ಬೇರೆ ಎಲ್ಲೂ ಹೆಚ್ಚು ಮಾಹಿತಿ ಸಿಗುವುದಿಲ್ಲವಾದ್ದರಿಂದ ಅವುಗಳ ಬಗ್ಗೆ ಹೆಚ್ಚಿನ ವಿಷಯವನ್ನು ಸಂಗ್ರಹಿಸಿ ಬರೆಯಲು ನನಗೆ ಸೂಚನೆ ನೀಡಿದರು. ಅದರಂತೆ ೧೯೭೮ರಲ್ಲಿ ಕೈಪಿಡಿಯ ಐದನೇ ಸಂಸ್ಕರಣದಲ್ಲಿ ಆ ವಿಚಾರಗಳನ್ನು ಬರೆದು ಮುದ್ರಿಸಿದೆನಲ್ಲದೆ ಇದನ್ನೇ ಬೇರೆ ಪುಸ್ತಕವಾಗಿಯೂ ಪ್ರಕಟಿಸಿದ್ದೆ. ಆ ಪ್ರತಿಗಳು ಮುಗಿದು ಹೋದ ಕಾರಣ ಈಗ ಪುನಃ ಮುದ್ರಿಸಲಾಗಿದೆ.

ಎಲ್ಲರೂ ಇದರ ಉಪಯೋಗವನ್ನು ಪಡೆಯಲೆಂದು ಆಶಿಸುತ್ತೇನೆ.

ಮೈಸೂರು — ಇತಿ ಸಜ್ಜನ ವಿಧೇಯ

ದಿನಾಂಕ : ೧೭-೧೦-೧೯೯೩ — **ಪಿ. ವಿಷ್ಣುತೀರ್ಥ**

## ಮೂರನೇ ಮುದ್ರಣದ ಬಗ್ಗೆ

ನನ್ನ ದೊಡ್ಡಪ್ಪನವರಾದ ಕೀ ॥ ಶೇ ॥ ಪಿ. ವಿಷ್ಣು ತೀರ್ಥರವರು 1993ರಲ್ಲಿ ಪುನರ್ಮುದ್ರಣ ಮಾಡಿಸಿದ "ಯಂತ್ರೋದ್ಧಾರಕರು ಮತ್ತು ನವ ವೃಂದಾವನ" ಪುಸ್ತಕದ ಪ್ರತಿಗಳೂ ಕೂಡಾ ಅತಿ ಶೀಘ್ರದಲ್ಲಿ ಮುಗಿದುಹೋದವು. ಇದನ್ನು ಮರು ಮುದ್ರಿಸುವಂತೆ ಅವರ ಅನೇಕ ಅಭಿಮಾನಿ ಶಿಷ್ಯರು ಪುನಃ ಪುನಃ ಪ್ರಾರ್ಥಿಸಿಕೊಂಡ ಕಾರಣ ಈ ಕೃತಿಯ ಮೂರನೆಯ ಮುದ್ರಣದ ಕಾರ್ಯಕ್ಕೆಗೆತ್ತಿಕೊಳ್ಳಲಾಯಿತು. ಇದೇ ಮಾರ್ಗಶಿರ ಶುದ್ಧ ತ್ರಯೋದಶಿ (ಡಿಸೆಂಬರ್ 11-12-2008)ಗೆ ನನ್ನ ತೀ ॥ ರೂ ॥ ವಿಷ್ಣುತೀರ್ಥರು ಹರಿಪಾದಾರವಿಂದ ಸೇರಿ ಹತ್ತು ವರ್ಷಗಳಾಗುವುವು. ಈ ಸಂದರ್ಭದ ಸವಿನೆನಪಿಗೋಸ್ಕರ ಈ ಕೃತಿಯು ಸಜ್ಜನರ ಕೈ ಸೇರುವ ಇಚ್ಛೆಯನ್ನು ಅವರ ಅಚ್ಚುಮೆಚ್ಚಿನ ಶಿಷ್ಯರಲ್ಲೊಬ್ಬರಾದ ಹಾಗೂ ಹಿರಿಯರಾದ ಶ್ರೀ ಎಚ್.ಪಿ. ಶ್ರೀಶಮೂರ್ತಿಯವರು ಅಭಿಪ್ರಾಯ ಪಟ್ಟರು, ಅದರಂತೆ 3ನೇ ಮುದ್ರಣ ತಮ್ಮೆಲ್ಲರ ಕೈ ಸೇರಲಿದೆ. ಈ ಪುಸ್ತಕದ ಮುದ್ರಣವನ್ನು ಅಂದವಾಗಿ, ಶೀಘ್ರವಾಗಿ ಮುದ್ರಿಸಿಕೊಟ್ಟ ಮೆ ॥ ಹೇಮಂತ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೆ.ಎಸ್. ಚಂದ್ರಶೇಖರ ರಾವ್ ಅವರಿಗೆ ನಾನು ಚಿರಋಣಿಯಾಗಿದ್ದೇನೆ.

ಸಜ್ಜನ ಮಹಾಶಯರು ಈ ಮಹಾನ್ ಕೃತಿಯನ್ನು ಕೊಂಡು ಓದಿ ಆ ಮಹಾಚೇತನದ ಆತ್ಮಕ್ಕೆ ಚಿರಶಾಂತಿಯುಂಟು ಮಾಡಲಿ ಎಂದು ಆಶಿಸುವ,

ಬೆಂಗಳೂರು — ತಮ್ಮೆಲ್ಲರ ನಮ್ರತೆಯ ಸೇವಕ

ದಿ ॥ 11-12-2008 — ಪಿ. ಶ್ರೀನಿವಾಸ ರಾವ್

(ಕೀ ॥ ಶೇ ॥ ವಿಷ್ಣುತೀರ್ಥರ ತಮ್ಮನ ಮಗ)

# ವಿಷಯಸೂಚಿ

# ಯಂತ್ರೋದ್ಧಾರಕರು

ಮತ್ತು

# ನವವೃಂದಾವನ

## ೧. ಪಂಪಾಕ್ಷೇತ್ರ (ಹಂಪೆ)

**ನಾರದರ ಹಿತೋಕ್ತಿ :** ಶ್ರೀಮದ್ಭಾಗವತದ ಸಪ್ತಮಸ್ಕಂಧದ ಹದಿನೈದನೆಯ ಅಧ್ಯಾಯದಲ್ಲಿ ಪುಣ್ಯತಮವಾದ ಪ್ರದೇಶದ ಲಕ್ಷಣಗಳನ್ನು ವಿವರಿಸುತ್ತಾ ನಾರದರು ಧರ್ಮರಾಜನಿಗೆ

**''ಸ ವೈ ಪುಣ್ಯತಮೋ ದೇಶಃ ಸತ್ಪಾತ್ರಂ ಯತ್ರ ಲಭ್ಯತೇ ।**
**ಯತ್ರ ಹ ಬ್ರಾಹ್ಮಣಕುಲಂ ತಪೋವಿದ್ಯಾದಯಾನ್ವಿತಮ್ ।**
**ಯತ್ರ ಗಂಗಾದಯೋ ನದ್ಯಃ ಪುರಾಣೇಷು ಚ ವಿಶ್ರುತಾಃ''**

ಎಂದು ಹೇಳುತ್ತಾರೆ. ಅದರಂತೆ 'ಎಲ್ಲಿ ಸತ್ಪಾತ್ರರು ಇರುತ್ತಾರೋ ತಪಸ್ಸು ವಿದ್ಯಾ ದಯಾದಿಗುಣಸಂಪನ್ನರಾದ ಮುನಿಗಳು ಎಲ್ಲಿ ವಾಸಿಸುತ್ತಾರೋ, ಪುರಾಣಗಳಲ್ಲಿ ಪ್ರಸಿದ್ಧ ವಾದ ಗಂಗಾನದಿಗಳು ಎಲ್ಲಿ ಹರಿಯುತ್ತವೋ ಅದು ಪಾವನತಮವಾದ ಪ್ರದೇಶ'ವೆಂದು ಅರ್ಥವಾಗುತ್ತದೆ.

ಈ ವಿಷಯವನ್ನೇ ಮುಂದುವರಿಸುತ್ತಾ ಅವರು 'ಭರತಖಂಡವನ್ನೆಲ್ಲ ಹುಡುಕಿ ದರೆ ಅಂಥಾ ಪುಣ್ಯತಮವಾದ ಸ್ಥಳಗಳು ಕೇವಲ ಹದಿನಾರು ಸಿಕ್ಕಾವು' ಎಂದು ತಿಳಿಸಲು ಅವುಗಳ ಹೆಸರು ಹೇಳುತ್ತಾ **ಪಂಪಾ ಬಿಂದುಸರಸ್ತಥಾ** ಎಂದು ನಮೂದಿಸಿ ಕಡೆಗೆ **ಏತೇ ಪುಣ್ಯತಮಾ ದೇಶಾಃ** ಎಂದು ಮುಗಿಸಿದ್ದಾರೆ. ಇದರಿಂದ ಪಂಪಾಕ್ಷೇತ್ರವು ಭಾರತದಲ್ಲಿರುವ ಅತ್ಯಂತ ಪುಣ್ಯತಮ ಕ್ಷೇತ್ರಗಳಲ್ಲಿ ಒಂದಾಗಿದೆಯೆಂಬುದು ಸ್ಪಷ್ಟ ವಾಗುತ್ತದೆ.

ಈ ವಿಚಾರವನ್ನು ಉಪಸಂಹರಿಸುತ್ತಾ ನಾರದರು ಕೊನೆಯಲ್ಲಿ

**ಏತಾನ್ ದೇಶಾನ್ ನಿಷೇವೇತ ಶ್ರೇಯಸ್ಕಾಮೋ ಹ್ಯಭೀಕ್ಷ್ಣಶಃ ||**

ಎಂದರೆ ಶ್ರೇಯೋಭಿಲಾಷಿಯು ಈ ಪ್ರದೇಶಗಳನ್ನು ವಿಶೇಷವಾಗಿ ಮತ್ತೆ ಮತ್ತೆ ಆಶ್ರ ಯಿಸಬೇಕೆಂದು ಉಪದೇಶಮಾಡಿದ್ದಾರೆ. ಅಂತೂ ಒಟ್ಟಿನಲ್ಲಿ ಈ ಕ್ಷೇತ್ರವು ಶಿವಕ್ಷೇತ್ರ ವೆಂದು ಪ್ರಸಿದ್ಧವಾಗಿದ್ದರೂ ಇದನ್ನು ಸಕಲರೂ ಸಂದರ್ಶಿಸಿ ಪುಣ್ಯಭಾಗಿಗಳಾಗ ಬೇಕೆಂಬುದೇ ನಾರದರ ಅಭಿಪ್ರಾಯ.

**ಪ್ರೇಕ್ಷಣೀಯ ವಿಶೇಷಗಳು :** ಹಂಪೆಯನ್ನು ನೋಡುವುದಕ್ಕೆ ನಾನಾ ಅಭಿರುಚಿಗಳುಳ್ಳ ಜನರು ಬರುತ್ತಾರೆ. ಸಕಲರೂ ಮುಖ್ಯವಾಗಿ ಈ ಸ್ಥಳದ ಒಡೆಯರಾದ ವಿರೂಪಾಕ್ಷ (ಪಂಪಾಪತಿ) ಮತ್ತು ಪಂಪಾಂಬೆಯರನ್ನೂ ಅವರ ಗುಡಿಗಳನ್ನೂ ನೋಡಬೇಕು. ಇನ್ನು ಇತಿಹಾಸಾಭಿಜ್ಞರಿಗೂ ಕಲಾಭಿಮಾನಿಗಳಿಗೂ ವಿದ್ಯಾರ್ಥಿಗಳಿಗೂ ಇಲ್ಲಿ ಹರಡಿಕೊಂಡಿರುವ ವಿಜಯನಗರದ ಅವಶೇಷಗಳು ಅತ್ಯಂತ ಆಕರ್ಷಣೀಯವಾಗಿವೆ. ಈ ಸಂಬಂಧೀ ಹೆಚ್ಚಿನ ವಿವರಗಳನ್ನು ಪ್ರಕಟಿತವಾಗಿರುವ ಅನೇಕ ಇಂಗ್ಲಿಷ್ ಪುಸ್ತಕಗಳಿಂದಲೂ ನಮ್ಮ 'ಹಂಪೆ, ವಿಜಯನಗರ ಮತ್ತು ಕಿಷ್ಕಿಂಧಾಗಳ ಮಾರ್ಗದ ಕೈಪಿಡಿ'ಗಳಿಂದಲೂ ತಿಳಿದುಕೊಳ್ಳಬಹುದು. ಆದರೆ ಧಾರ್ಮಿಕ ಭಾವನೆಯಿಂದ ಹಂಪೆ ನೋಡಲು ಬರುವ ವೈಷ್ಣವಯಾತ್ರಾರ್ಥಿಗಳಿಗೆ ಚಕ್ರತೀರ್ಥದ ದಡದಲ್ಲಿರುವ ಯಂತ್ರೋದ್ಧಾರಕ ಪ್ರಾಣದೇವರೂ, ರಘುನಂದನತೀರ್ಥರ ಮತ್ತು ನರಹರಿತೀರ್ಥರ ವೃಂದಾವನಗಳೂ, ಪುರಂದರದಾಸರ ಮಂಟಪವೂ, ಆನೆಗೊಂದಿಗೆ ಆಚೆ ನಡುಗಡ್ಡೆಯಲ್ಲಿರುವ ನವವೃಂದಾವನವೂ ತಪ್ಪದೆ ನೋಡಬೇಕಾದ ಪ್ರೇಕ್ಷಣೀಯ ವಿಶೇಷಗಳು. ಆದರೂ ಇವುಗಳು ಹೆಚ್ಚು ಪ್ರಚಾರದಲ್ಲಿಲ್ಲದಿರುವುದರಿಂದಲೂ ಇವುಗಳ ಮಹಿಮಾ ವಿಶೇಷಗಳನ್ನು ಚೆನ್ನಾಗಿ ತಿಳಿದವರಾಗಲಿ ಅಥವಾ ತಿಳಿಸುವ ಪುಸ್ತಕಗಳಾಗಲಿ ದುರ್ಲಭವಾಗಿರುವುದರಿಂದಲೂ ಎಷ್ಟೋ ಜನರಿಗೆ ಇವುಗಳಿರುವ ವಿಷಯವೇ ತಿಳಿಯದು, ಅಥವಾ ಇರುವುದು ತಿಳಿದಿದ್ದರೂ ಹೆಚ್ಚಿನ ಸಂಗತಿ (ಮಾಹಿತಿ) ಗೊತ್ತಿಲ್ಲ. ಹೀಗೆ ಬಹಳ ಮಂದಿ, ಎರಡು ರೀತಿಯಿಂದ, ವಂಚಿತರಾಗಿದ್ದಾರೆ. ಅಂಥಾ ವೈಷ್ಣವ ಯಾತ್ರಾರ್ಥಿಗಳ ಉಪಯೋಗಕ್ಕಾಗಿಯೇ ಈ ಕಿರು ಹೊತ್ತಗೆಯನ್ನು ಬರೆದು ಪ್ರಕಟಿಸಲಾಗಿದೆ.

**ಹಂಪೆ ಎಲ್ಲಿದೆ ? ಅಲ್ಲಿಗೆ ಬರುವುದು ಹೇಗೆ ?** ಹಂಪೆಯು ಕರ್ನಾಟಕ ರಾಜ್ಯಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಒಂದು ಸಣ್ಣ ಗ್ರಾಮ. ಹೊಸಪೇಟೆಯು ಒಂದು ತಾಲೂಕಿನ ಕೇಂದ್ರ ಮತ್ತು ದಕ್ಷಿಣ ಮಧ್ಯ ರೈಲ್ವೆಯ ಹುಬ್ಬಳ್ಳಿ–ಗುಂತಕಲ್ ಲೈನಿನಲ್ಲಿರುವ ದೊಡ್ಡ ರೈಲ್ವೆ ಸ್ಟೇಶನ್ ಮತ್ತು ಜಂಕ್ಷನ್ನು. ಇಲ್ಲಿಂದ ಹಂಪೆಯು ಪೂರ್ವದ ಕಡೆ ೧೧ ಕಿ. ಮೀ. ದೂರದಲ್ಲಿದೆ. ಹೊಸಪೇಟೆಗೂ ಹಂಪೆಗೂ ಮಧ್ಯೆ ರಾಜ್ಯದ ಸಾರಿಗೆ ಸಂಸ್ಥೆಯ ಬಸ್ಸುಗಳ ಸೌಕರ್ಯವಿದೆ. ಅಲ್ಲದೆ ಖಾಸಗಿ ವಾಹನಗಳೂ (ವ್ಯಾನುಗಳು, ಟ್ಯಾಕ್ಸಿಗಳು) ದೊರಕುತ್ತವೆ. ಸಾರಿಗೆ ಸಂಸ್ಥೆಯವರೇ ಪ್ರತಿ ಶನಿವಾರ ಭಾನುವಾರಗಳಲ್ಲಿ ಪ್ರವಾಸಿಗಳಿಗೆ ಈ ಸ್ಥಳದ ಪ್ರಾಯಶಃ ಮುಖ್ಯ ವಿಶೇಷಗಳನ್ನು ತೋರಿಸಿಕೊಂಡು ಬರುವಂತೆ 'ಪಂಪಾದರ್ಶನ'ವೆಂಬ ಬಸ್ಸಿನ ವ್ಯವಸ್ಥೆಯನ್ನೂ ಮಾಡಿದ್ದಾರೆ. ಅನೇಕರು ಟೂರಿಸ್ಟ್ ಬಸ್ಸುಗಳಲ್ಲೂ ಬಂದು ಹೋಗುವರು.

**ಭೋಜನ ವಸತಿಗಳ ಸೌಕರ್ಯ :** ಹಂಪೆಯಲ್ಲಿ ಕೆಲವು ಛತ್ರಗಳೇನೋ ಇವೆ. ಅಲ್ಲದೆ ಹಂಪೆಗುಡಿಯಲ್ಲೂ ಕೆಲವು ರೂಮುಗಳು ಬಾಡಿಗೆಗೆ ದೊರಕುತ್ತವೆ. ಆದರೂ ಯಾವುವೂ ಹೆಚ್ಚು ಜನಗಳು ಬಂದಲ್ಲಿ ಸಾಕಷ್ಟು ಸೌಕರ್ಯವಾಗಿಲ್ಲ. ಕೆಲವು ಸಾಮಾನ್ಯ ದರ್ಜೆಯ ಹೋಟಲುಗಳೂ ಫಲಾಹಾರಮಂದಿರಗಳೂ ಇವೆ. ಹೆಚ್ಚಿಗೆ ಸೌಕರ್ಯವನ್ನು

ಅಪೇಕ್ಷಿಸುವವರು ಹೊಸಪೇಟೆಗೆ ಹೋಗಬೇಕು. ಸ್ವತಃ ಅಡಿಗೆ ಮಾಡಿಕೊಳ್ಳುವವರಿಗೆ ದೇವಸ್ಥಾನದವರು ಪಾತ್ರೆಗಳನ್ನು ಎರವಲಾಗಿ ಕೊಡುವರು. ಹಂಪೆಯಲ್ಲಿ ಟೆಲಿಫೋನ್ ಅನುಕೂಲತೆಯುಳ್ಳ ಅಂಚೆಕಛೇರಿಯೂ ಆಸ್ಪತ್ರೆಯೂ ಇವೆ.

**ಏನೇನು ನೋಡಬೇಕು ?** ಹಂಪೆಗೆ ಬಂದವರೆಲ್ಲರೂ ಮುಖ್ಯವಾಗಿ ಪಂಪಾ ಪತಿ ಗುಡಿಯನ್ನೂ, ಚಕ್ರತೀರ್ಥದ ಬಳಿ ಇರುವ ಕೋದಂಡರಾಮನಗುಡಿ, ಸೂರ್ಯನಾರಾ ಯಣನಗುಡಿ, ಯಂತ್ರೋದ್ಧಾರಕರ ಗುಡಿಗಳನ್ನೂ, ವಿಜಯನಗರದ ಅವಶೇಷಗಳಾದ ವಿಠ್ಠಲಗುಡಿ ಅಚ್ಯುತರಾಯನಗುಡಿ ಕೃಷ್ಣನಗುಡಿ ಹಜಾರರಾಮನ ಗುಡಿಗಳನ್ನೂ ಸಾಸಿವೆ ಕಾಳು ಗಣೇಶ ನರಸಿಂಹ ಕಮಲಮಹಲು ದಸರಾದಿಬ್ಬ ಮೊದಲಾದುವನ್ನೂ ನೋಡು ವರು. ವೈಷ್ಣವ ಯಾತ್ರಾರ್ಥಿಗಳು ವಿಶೇಷವಾಗಿ ರಘುನಂದನತೀರ್ಥರ ಮತ್ತು ನರಹರಿ ತೀರ್ಥರ ವೃಂದಾವನಗಳನ್ನೂ ಪುರಂದರದಾಸರ ಮಂಟಪವನ್ನೂ ಸಂದರ್ಶಿಸಬೇಕೆಂದೂ ಹೇಳಿದ್ದೇವಷ್ಟೆ. ಕೊನೆಗೆ ಆನೆಗೊಂದಿಗೆ ಹೋಗಿ ನವವೃಂದಾವನಗಳ ದರ್ಶನಮಾಡ ಬೇಕು. ಈಗ ಮೊದಲು ಯಂತ್ರೋದ್ಧಾರಕರು ಎಲ್ಲಿದ್ದಾರೆ, ಅಲ್ಲಿಗೆ ಹೋಗುವುದು ಹೇಗೆ ಎಂಬುದನ್ನು ನೋಡೋಣ ಬನ್ನಿ.

## ೨. ಯಂತ್ರೋದ್ಧಾರಕರು

**ಗುಡಿಗೆ ಮಾರ್ಗ :** ಹಂಪೆಗೆ ಬಂದು ಪಂಪಾಪತಿಯ ದರ್ಶನ ಮಾಡಿಕೊಂಡ ಬಳಿಕ ಒನಕೆಕಿಂಡಿಯ ಮಾರ್ಗವಾಗಿ ಚಕ್ರತೀರ್ಥದ ಬಳಿಗೆ ಬಂದರೆ ಅದರ ದಕ್ಷಿಣದ ದಡ ದಲ್ಲಿ ಕೋದಂಡರಾಮನ ಗುಡಿಯೂ, ಅದರ ಹಿಂದೆ, ಮಂಟಪಗಳ ಮೇಲ್ಭಾಗದಲ್ಲಿ ಸೂರ್ಯನಾರಾಯಣನ ಗುಡಿಯೂ, ಇನ್ನೂ ಹಿಂದೆ ಯಂತ್ರೋದ್ಧಾರಕರ ಗುಡಿಯೂ ಕಾಣಿಸುತ್ತವೆ. ನದಿಯಲ್ಲಿ ಪೂರ್ಣಪ್ರವಾಹವಿದ್ದಾಗ ಒನಕೆಕಿಂಡಿಯ ಮಾರ್ಗವು ಮುಚ್ಚಿ ಹೋಗುವುದುಂಟು. ಅಂಥ ಸಂದರ್ಭದಲ್ಲಿ ಎದುರು ಬಸವನ ಹಿಂದಿನ ಗುಡ್ಡದ ಹಾದಿ ಯಿಂದ ಅಚ್ಯುತರಾಯನ ಗುಡಿಗೆ ಬಂದು, ಸೂಳೆ ಬಜಾರು ಮಾರ್ಗವಾಗಿ ವರಾಹನ ಗುಡಿ ಹಾದು ಚಕ್ರತೀರ್ಥಕ್ಕೂ ಅಲ್ಲಿರುವ ಗುಡಿಗಳಿಗೂ ಬರಬೇಕಾಗುತ್ತದೆ.

**ಯಂತ್ರೋದ್ಧಾರಕ ಹನುಮಂತದೇವರ ಗುಡಿ :** ಹಿಂದುಗಡೆ ಗುಡ್ಡಕ್ಕೆ ಹೊಂದಿಕೊಂಡ ಎತ್ತರದ ಕಟ್ಟೆಯ ಮೇಲೆ ಇದೆ. ಸುಮಾರು ಹದಿನೈದು ಮೆಟ್ಟಲು (ಪಾಟಣಿಗೆ) ಹತ್ತಿ ಗುಡಿಗೆ ಹೋಗಬೇಕು. ಈ ಗುಡಿಯಲ್ಲಿರುವಂತಹ ಹನುಮಪ್ಪನ (ಪ್ರಾಣದೇವರ) ವಿಗ್ರಹವು ಬೇರೆ ಎಲ್ಲೂ ಇಲ್ಲ. ಕುಳಿತ ಪ್ರಾಣದೇವರ ವಿಗ್ರಹಗಳೇ ಅತಿ ವಿರಳ ; ಆದರಲ್ಲೂ ಈ ಮೂರ್ತಿ ಅತ್ಯಂತ ಭವ್ಯವೂ, ಆಕರ್ಷಣೀಯವೂ ಆಗಿದೆ. ಈ ಮೂರ್ತಿಯು ಹಿಂದುಗಡೆ ಇರುವ ಆ ಗುಡ್ಡಕ್ಕೆ ಸೇರಿದ ಒಂದು ಭಾರಿ ಬಂಡೆಗಲ್ಲಿನ ಮೇಲೆಯೇ ಚಿತ್ರಿತವಾಗಿದೆ. ಇದಕ್ಕೆ ನಿತ್ಯ ಪೂಜಾದಿಗಳು ವೈಷ್ಣವ ಸಂಪ್ರದಾಯಕ್ಕೆ ಅನುಗುಣವಾಗಿ ನಡೆಯುತ್ತವೆ. ಸಾಮಾನ್ಯ ದಿನಗಳಲ್ಲಿ ಈ ಗುಡಿಯು ಬೆಳಿಗ್ಗೆ ಮಾತ್ರ

ಸುಮಾರು ೧೧ ಗಂಟೆ ವರೆಗೆ ತೆರೆದಿರುತ್ತದೆ. ಆದರೆ ಜಾತ್ರೆಗಳಲ್ಲೂ ಉತ್ಸವದಿನಗಳಲ್ಲೂ ಬೆಳಗಿನಿಂದ ರಾತ್ರಿಯವರೆಗೂ ದರ್ಶನಾವಕಾಶವಿರುತ್ತದೆ.

**ದೇವರ ಮೂರ್ತಿ :** ಇಲ್ಲಿರುವ ಪ್ರಾಣದೇವರ ಮೂರ್ತಿಯನ್ನು ಮಾಧ್ವ ಸಂಪ್ರದಾಯದ ಪ್ರಸಿದ್ಧ ಸನ್ಯಾಸಿಗಳಾದ ಶ್ರೀ ವ್ಯಾಸರಾಯಸ್ವಾಮಿಗಳವರು ಶಾ. ಶ. ೧೪೨೨ನೇ ರೌದ್ರಿ ಸಂವತ್ಸರದಲ್ಲಿ (ಕ್ರಿ. ಶ. ೧೫೦೦ರಲ್ಲಿ) ಪ್ರತಿಷ್ಠೆ ಮಾಡಿದರೆಂದು ತಿಳಿದು ಬಂದಿದೆ. ಇಲ್ಲಿ ಯಂತ್ರರೇಖೆಗಳ ಮಧ್ಯೆ ಜಪಮಾಲೆ ಹಿಡಿದು ಯೋಗಾಸನಾರೂಢರಾದ ಪ್ರಾಣದೇವರು (ಹನುಮಪ್ಪ) ಪದ್ಮಾಸನದಲ್ಲಿ ಧ್ಯಾನಮಗ್ನರಾಗಿ ಕುಳಿತಿರುವಂತೆ ಚಿತ್ರಿಸಿದೆ. ಒಂದಕ್ಕೊಂದು ಹೆಣೆದುಕೊಂಡಿರುವ ಹನ್ನೆರಡು ಕಪಿಗಳ ಮಾಲೆಯಿಂದ ಯಂತ್ರವನ್ನು ಸುತ್ತಲೂ ಬಂಧಿಸಿದೆ. ಯಂತ್ರದ ಕೋಣಗಳಲ್ಲೆಲ್ಲಾ ಬೀಜಾಕ್ಷರಗಳನ್ನು ಕೆತ್ತಿದೆ. ಈ ವಿಷಯದಲ್ಲಿ ಒಂದು ಐತಿಹ್ಯವಿದೆ.

ಯಂತ್ರೋದ್ಧಾರಕರ ಮುಂದೆ ಇತ್ತೀಚೆಗೆ ಹನುಮ–ಭೀಮ–ಮಧ್ವ ಎಂಬ ಅವತಾರತ್ರಯ ದ್ಯೋತಕವಾದ ವಿಗ್ರಹವು ಪ್ರತಿಷ್ಠಿಸಲ್ಪಟ್ಟಿದೆ.

**ಐತಿಹ್ಯ :** ವ್ಯಾಸರಾಯರು ಚಕ್ರತೀರ್ಥದಲ್ಲಿ ಮಿಂದು ಈಗ ಪ್ರಾಣದೇವರು ಇರುವ ಸ್ಥಳದಲ್ಲಿ ಕುಳಿತು ಪ್ರಾತರನುಷ್ಠಾನವನ್ನು ಮಾಡುತ್ತಿದ್ದರಂತೆ. ಅವರು ಧ್ಯಾನಾವಸ್ಥೆಯಲ್ಲಿ ಕಣ್ಣುಮುಚ್ಚಿದಾಗ ಎದುರಿಗಿದ್ದ ಬಂಡೆಯಿಂದ ಒಂದು ಕಪಿ ಹೊರಗೆ ಬಂದು ಸುಳಿದಾಡುತ್ತಿದ್ದಂತೆಯೂ ಕಣ್ಣುಬಿಡುವಷ್ಟರಲ್ಲಿ ಪುನಃ ಅದೇ ಬಂಡೆಯೊಳಗೇ ಪ್ರವೇಶಿಸಿಬಿಡುತ್ತಿದ್ದಂತೆಯೂ ಗೋಚರವಾಗುತ್ತಿತ್ತು. ಹೀಗೆ ಅನೇಕ ದಿವಸ ನಡೆಯಿತು. ಒಂದು ದಿನ ರಾತ್ರಿ ಪೂಜಾಸಮಯದಲ್ಲಿ ವ್ಯಾಸರಾಯರು "ನೀನೆ ವರಗುರು ಮುಖ್ಯಪ್ರಾಣಾ! ..."ಎಂಬ ಕೀರ್ತನೆಯನ್ನು ರಚಿಸಿ ಪ್ರಾಣದೇವರನ್ನು ಸ್ತುತಿಸಿ, 'ನನ್ನಿಂದ ಏನು ಸೇವೆ ಆಗಬೇಕಾಗಿದೆ ಸ್ವಾಮಿ ? ಅಪ್ಪಣೆ ಮಾಡಬೇಕು' ಎಂದು ಪ್ರಾರ್ಥಿಸಿಕೊಂಡು ಮಲಗಿದರು. ಪ್ರಾಣದೇವರು ಬೆಳಗಿನ ಝಾವ ಸ್ವಪ್ನದಲ್ಲಿ ವ್ಯಾಸರಾಯರಿಗೆ ಕಾಣಿಸಿಕೊಂಡು 'ನಮಗೆ ನಮ್ಮ ಸ್ವಾಮಿಯ (ಶ್ರೀರಾಮದೇವರು) ದರ್ಶನವು ಪಾವನವಾದ ಈ ಸ್ಥಳದಲ್ಲಿಯೇ ಆಯಿತು. ಇಲ್ಲಿ ನಮ್ಮನ್ನು ಪ್ರತಿಷ್ಠೆ ಮಾಡು' ಎಂದು ಆಜ್ಞಾಪಿಸಿದರು. ಅವರ ಆಜ್ಞೆಯನ್ನು ಶಿರಸಾವಹಿಸಿ ವ್ಯಾಸರಾಯರು ಮರುದಿವಸವೇ ಆ ಸ್ಥಳಕ್ಕೆ ಬಂದು, ಯಾವ ಬಂಡೆಯೊಳಗಿಂದ ಕಪಿಯು ಹೊರಗೆ ಬಂದಂತೆ ಕಾಣಿಸುತ್ತಿತ್ತೋ ಆ ಬಂಡೆಯ ಮೇಲೆಯೇ ಅಂಗಾರದಿಂದ ಪ್ರಾಣದೇವರ ಮೂರ್ತಿಯನ್ನು ಬರೆದು ಅದಕ್ಕೆ ದ್ವಾದಶ ನಾಮಗಳನ್ನು ತಿದ್ದಿದರು. ಆದರೆ ನಾಮ ತಿದ್ದಿದೊಡನೆಯೇ ಪ್ರಾಣದೇವರ ಆ ಮೂರ್ತಿಯೇ ಹಾರಿ ಹೋಯಿತು (ಅಂದರೆ, ಅದೃಶ್ಯವಾಗಿ ಹೋಯಿತು).

ಆಗ ವ್ಯಾಸರಾಯರು ಮತ್ತೊಂದು ಬೇರೆ ಮೂರ್ತಿ ಬರೆದು ನಾಮ ತಿದ್ದಿದರು ; ಅದೂ ಹಾಗೆಯೇ ಹಾರಿಹೋಯಿತು. ಹೀಗೆ ಹನ್ನೆರಡು ಸಲ ಬೇರೆ ಬೇರೆ ರೀತಿಯಲ್ಲಿ (ಬೇರೆ ಬೇರೆ ಭಾವಗಳಲ್ಲಿ) ಚಿತ್ರಗಳನ್ನು ಬರೆದರೂ ಅವರ ಪ್ರಯತ್ನ ನೆರವೇರಲಿಲ್ಲ. ಕಡೆಗೆ ಇಂಗಿತಜ್ಞರಾದ ಸ್ವಾಮಿಗಳು ತಂತ್ರಸಾರೋಕ್ತ ಪ್ರಕಾರ ಯಂತ್ರವನ್ನು ಬರೆದು ಅದರ ಮಧ್ಯೆ ಯೋಗಾಸನಾರೂಢರಾಗಿ ಜಪಮಾಲೆ ಹಿಡಿದು ಕುಳಿತಂತೆ ಪ್ರಾಣದೇವ

ರನ್ನು ಚಿತ್ರಿಸಿದರಲ್ಲದೆ, ಹಿಂದೆ ಹಾರಿಹೋಗಿದ್ದ ಹನ್ನೆರಡು ಕಪಿಗಳನ್ನೇ ಮಾಲಾಕಾರವಾಗಿ ಕಪಿ ಬಂಧನದಿಂದಲೇ ಹೆಣೆದು, ದಿಗ್ಬಂಧನ ಮಾಡಿ, ಕೊಟ್ಟ ಕೊನೆಯಲ್ಲಿ ಪ್ರಾಣದೇವರಿಗೆ ದ್ವಾದಶ ನಾಮಗಳನ್ನು ತಿದ್ದಿದರು. ಈ ಸಲ ಬರೆದ ರೇಖೆಗಳೆಲ್ಲವೂ ಹಾಗೆಯೇ ಉಳಿದು ಕೊಂಡವು ; ಪ್ರಾಣದೇವರ ಮೂರ್ತಿ ಕಲ್ಲಿನ ಮೇಲೆ ಒಡಮೂಡಿತು. ಕೂಡಲೇ ಪ್ರಾಣ ಪ್ರತಿಷ್ಠೆ ಮಾಡಿ ಪಂಚಾಮೃತಾದಿ ಪರಿಕರಗಳನ್ನು ತರಿಸಿಕೊಂಡು ಪ್ರಾಣದೇವರ ಪೂಜೆ ಯನ್ನು ಆರಂಭಿಸಿಬಿಟ್ಟರು.

ಪ್ರಾರಂಭದಲ್ಲಿ ಕೇವಲ ರೇಖೆಗಳು ಮಾತ್ರವೇ ಇದ್ದುವು. ಕಾಲಕ್ರಮದಲ್ಲಿ ಏರು-ತಗ್ಗುಗಳು ಸ್ಪಷ್ಟವಾಗುತ್ತಾ ಬಂದುವಂತೆ. ಅದೂ ಅಲ್ಲದೆ ಮೊದಲು ದೇವರು ಬಟ್ಟಾ ಬಯಲಿನಲ್ಲೇ ಇದ್ದರು. ವಿಜಯನಗರದ ಅರಸನಾಗಿದ್ದ ತಮ್ಮಾರಾಯ (ಅಥವಾ ಸಾಳುವ ನರಸಿಂಹನ ಮಗನಾದ ಇಮ್ಮಡಿ ನರಸಿಂಹ)ನು ಈಗಿರುವ ಗುಡಿಯನ್ನು ಕಟ್ಟಿಸಿ ಕೊಟ್ಟ ನಂತೆ. ಈ ಯಂತ್ರದಲ್ಲಿ ಒಂದು ಕೋಟಿ ಮಂತ್ರಗಳ ಬೀಜಾಕ್ಷರಗಳು ಅಡಕವಾಗಿವೆ ಯೆಂದೂ, ಸಿದ್ಧಿಗಾಗಿ ವ್ಯಾಸರಾಯರು ಮೂರು ಕೋಟಿ ಜಪವನ್ನು ಧಾರೆಯೆರೆದು ಕೊಟ್ಟಿದ್ದಾರೆಂದೂ ಆದಕಾರಣವೇ ಈ ಯಂತ್ರೋದ್ಧಾರಕ ಪ್ರಾಣದೇವರ ಸೇವೆಯಿಂದ ಭೂತಪ್ರೇತ ಪಿಶಾಚಪೀಡೆಗಳೂ ವಾತಶೀತಜ್ವರ ಭೀತ್ಯಾದಿಗಳೂ ನಿವಾರಣೆಯಾಗಿ ಸಕಲಾ ಭೀಷ್ಟಗಳೂ ಆತುರದಿಂದಲೇ ಸಿದ್ಧಿಸುವುವೆಂದೂ ವಿಜಯದಾಸರು ಅಧಿಕಾರವಾಣಿಯಿಂದ ಯಂತ್ರೋದ್ಧಾರಕ ಸುಳಾದಿಯಲ್ಲಿ ನುಡಿದಿದ್ದಾರೆ. ಹೀಗೆ ಈ ಸ್ಥಳವು ಜಪ–ತಪಾದ್ಯನು ಷ್ಠಾನಗಳಿಗೆ ಒಳ್ಳೆಯ ಸಿದ್ಧಿಸ್ಥಾನ. ಆದಕಾರಣವೇ ಅನೇಕರು ಇಲ್ಲಿ ಬಂದು ಸೇವೆಸೂತ್ರ ಗಳನ್ನು ನಡೆಸುವರು. ಪುರಂದರದಾಸರ ಮಗನಾದ ಮಧ್ವಪತಿಯು ಈ ಸ್ವಾಮಿಗೆ ಅನ್ನ ವನ್ನು ಊಟ ಮಾಡಿಸಿದ್ದನೆಂದೂ ಒಂದು ಹೇಳಿಕೆಯಿದೆ.

ಉತ್ಸವಕಾಲ : ಕೇವಲ ಯಂತ್ರೋದ್ಧಾರಕರಿಗೆ ಸಂಬಂಧಿಸಿದ ಯಾವ ವಿಶೇಷ ಉತ್ಸವವೂ ನಡೆಯುವ ವಾಡಿಕೆಯಿಲ್ಲ. ಹಂಪೆಯ ಜಾತ್ರಾಕಾಲದಲ್ಲೇ ಇಲ್ಲೂ ಉತ್ಸವ ತತ್ರಾಪಿ ಚೈತ್ರಮಾಸದ ಹುಣ್ಣಿಮೆಯ ದಿನ ಹನುಮಜ್ಜಯಂತಿಯ ಪ್ರಯುಕ್ತ ಪ್ರಾಣದೇವರಿಗೆ ಹೆಚ್ಚಿನ ಪೂಜಾದಿ ಸಂಭ್ರಮಗಳು ನಡೆಯುವುದರಿಂದಲೂ ಗುಡಿಯು ಬೆಳಗಿನಿಂದ ರಾತ್ರಿಯವರೆಗೂ ತೆರೆದಿದ್ದು ದರ್ಶನಕ್ಕೆ ಅನುಕೂಲವಿರುವುದರಿಂದಲೂ ಹೆಚ್ಚು ಜನರು ಬಂದುಹೋಗುವರು, ಇತ್ತೀಚೆಗೆ (ಸುಮಾರು ಮೂವತ್ತು ವರ್ಷಗಳಿಂದ) ಭಕ್ತರೊಬ್ಬರು ಪ್ರತಿವರ್ಷ ಮಾರ್ಗಶೀರ್ಷ ಮಾಸದಲ್ಲಿ (ಫಲಪೂಜೆಯ ಜಾತ್ರಾಕಾಲ ದಲ್ಲಿ) ಯಂತ್ರೋದ್ಧಾರಕರಿಗೆ ಲಕ್ಷ ತುಳಸೀ ಅರ್ಚನಾದಿ ಸೇವೆಗಳನ್ನೂ ಹನುಮದ್ವ್ರತಾ ಚರಣೆಯನ್ನೂ ನಡೆಸುತ್ತಾ ಬಂದಿದ್ದಾರೆ. ಆಗ ದರ್ಶನಕ್ಕಾಗಿಯೂ ಸೇವೆಗಾಗಿಯೂ ಅನೇಕ ಮಂದಿ ನೆರೆಯುವರು. ಈ ಸಂದರ್ಭಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ಈ ಗುಡಿಯಲ್ಲಿ ಹೆಚ್ಚಿನ ಜನಗಳ ಗದ್ದಲವಿರುವುದಿಲ್ಲ.

ಮುಂದೆ ಯಂತ್ರೋದ್ಧಾರಕರಿಗೆ ಸಂಬಂಧಿಸಿದ ಸಾಹಿತ್ಯವನ್ನು ಸಂಗ್ರಹಿಸಿ ಕೊಡ ಲಾಗಿದೆ.

### ಶ್ರೀಮದ್ವ್ಯಾಸರಾಜ ವಿರಚಿತ

## ಯಂತ್ರೋದ್ಧಾರಕ ಹನುಮತ್‌ಸ್ತೋತ್ರಮ್

ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಮ್ ।
ಪೀನವೃತ್ತಮಹಾಬಾಹುಂ ಸರ್ವಶತ್ರು-ನಿವಾರಣಮ್ ॥ ೧ ॥

ನಾನಾರತ್ನಸಮಾಯುಕ್ತ ಕುಂಡಲಾದಿವಿರಾಜಿತಮ್ ।
ಸರ್ವದಾಽಭೀಷ್ಟದಾತಾರಂ ಸತಾಂ ವೈ ದೃಢಮಾಹವೇ ॥ ೨ ॥

ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥಗಿರೌ ಸದಾ ।
ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ ॥ ೩ ॥

[1]ನಾನಾದೇಶಾ[1] ಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ ।
ಧೂಪದೀಪಾದಿ-ನೈವೇದ್ಯೈಃ ಪಂಚಖಾದ್ಯೈಶ್ಚ ಶಕ್ತಿತಃ ॥ ೪ ॥

[2]ವ್ರಜಾಮಿ[2] [3]ಹನುಮತ್ಪಾದಂ[3] ಹೇಮಕಾಂತಿಸಮಪ್ರಭಮ್ ।
ವ್ಯಾಸತೀರ್ಥ-[4]ಯತೀಂದ್ರಾಣಾಂ[4] ಪೂಜಿತಂ [5]ಪ್ರಣಿಧಾನತಃ[5] ॥ ೫ ॥

ತ್ರಿವಾರಂ ಯಃ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾದ್ವಿಜೋತ್ತಮಃ ।
ವಾಂಛಿತಂ ಲಭತೇಽ[6]ಭೀಷ್ಟಂ[6] ಷಣ್ಮಾಸಾ[7]ಭ್ಯಂತರಂ[7] ಖಲು ॥ ೬ ॥

ಪುತ್ರಾರ್ಥೀ ಲಭತೇ ಪುತ್ರಂ ಯಶೋಽರ್ಥೀ ಲಭತೇ ಯಶಃ ।
ವಿದ್ಯಾರ್ಥೀ ಲಭತೇ ವಿದ್ಯಾಂ [8]ಧನಾರ್ಥೀ ಧನಮಾಪ್ನುಯಾತ್[8] ॥ ೭ ॥

ಸರ್ವಥಾ ಮಾಸ್ತುಸಂದೇಹೋ ಹರಿಃ ಸಾಕ್ಷೀ ಜಗತ್ಪತಿಃ ।
ಯಃ ಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್ ॥ ೮ ॥

### ವಿಜಯದಾಸರು ರಚಿಸಿದ

## ಯಂತ್ರೋದ್ಧಾರಕ ಪ್ರಾಣದೇವರ ಸುಳಾದಿ

(ಸೂಚನೆ : ಈ ಸುಳಾದಿಯು ನನಗೆ ಮೊದಲಿಗೆ ಹೊಸಪೇಟೆಯಲ್ಲಿರುವ ಶ್ರೀ ಸರಾಫ್ ನಾರಾಯಣರಾಯರಲ್ಲಿ ಸಿಕ್ಕಿತು. ಇದು ಲಿಂಗಸೂಗೂರು ವರದೇಂದ್ರ ಸಾಹಿತ್ಯದ 'ಕ್ಷೇತ್ರಮಹಿಮಾ' ಪುಸ್ತಕದಲ್ಲೂ ಇದೆ.)

---

ಪಾಠಾಂತರಗಳು ; 1 ದೇಶಗತೈಃ 2 ಭಜಾಮಿ 3 ಶ್ರೀ ಹನೂಮಂತಂ 4 ಯತೀಂದ್ರೇಣ, ಯತೀಂದ್ರೈಶ್ಚ 5 ಚ ವಿಧಾನತಃ 6 ಭೀಕ್ಷ್ಣಂ 7 ಭ್ಯಂತರೇ, ನಂತರಂ 8 ಧನಾರ್ಥೀ ಲಭತೇ ಧನಮ್

ಧ್ರುವತಾಳ

ಯಂತ್ರೋದ್ಧಾರಕ ಹನುಮ ಸುರಸಾರ್ವಭೌಮ
ಯಂತ್ರಧಾರಕ ಎನಗೆ ಮನಸಿನೊಳಗೆ
ಯಂತ್ರವಾಹಕನ ಪೂರ್ಣದಯದಿಂದ ಸಕ–
ಲಾಂತರಿಯಾಮಿಯಾಗಿ ಚರಾಚರದಲ್ಲಿಯು
ತಂತ್ರವನು ನಡೆಸುವ ಮಂತ್ರಿ ಈತನು ಕಾಣೊ ಸ್ವಾ
ತಂತ್ರಪೂರುಷ ವಿಜಯವಿಠಲನ್ನ ನಿಜ ಭಕ್ತ
ಅಂತ್ರವಿಲ್ಲದೆ[1] ತನ್ನ ಸ್ತುತಿಪರನ್ನ ಪೊರೆವ ॥ ೧ ॥

ಮಟ್ಟತಾಳ

ವ್ಯಾಸರಾಯರು ತಮ್ಮ ಮಾಸಲ ಮನದಲ್ಲಿ ನಿಜ
ಧ್ಯಾಸನ ಧ್ಯಾನದಲಿ ಶ್ರೀಶನ ಪೂಜಿಸಲು
ಆ ಸಮಯದೊಳು ನೀ ಸುಳಿದು ನಿಂದು
ಈ ಶಿಲೆಯೊಳಗೆ ಪ್ರಕಾಶಮಾನವಾಗೆ
ತ್ರಿಸಾಮಾ ವಿಜಯವಿಠಲನ ಸೇವೆ ಹಾ-
ರೈಸಿ ಇಲ್ಲೆ ಮೆರೆದೆ, ದಾಸರನ ಪೊರೆದೆ ॥ ೨ ॥

ತ್ರಿಪುಟತಾಳ

ಮೂರುಕೋಟಿ ಬೀಜಾಕಾರ[2] ಮಂತ್ರವ ಜಪಿಸಿ
ಧಾರೆಯನು ಎರೆದು ನಿನ್ನಯ ಸುಂದರ
ಮೂರುತಿಯನು ನಿರ್ಮಾಣವನು ಮಾಡಿದರು
ಆರು ಕೋಣೆ ವಲಯಾಕಾರ ವಾನರ ಬದ್ಧ
ಚಾರು ಶೋಭಿತ ತುಂಗಾತೀರದಲ್ಲಿ ವಾಸ
ವೀರ ವಿಜಯವಿಠಲನ್ನ
ಕಾರುಣ್ಯದಲಿ ಅನುಗುಣ್ಯವಾಗಿ ನಿಂದೆ ॥ ೩ ॥

ಅಟ್ಟತಾಳ

ಒಂದು ಕೋಟಿ ಬೀಜಮಂತ್ರ-
ದಿಂದ ಸುತ್ತ ಯಂತ್ರವ ಬರೆಸಿ
ಅಂದು ಪ್ರಾಣಪ್ರತಿಷ್ಠೆಯ ಮಾಡಿ
ನಿಂದಿರಿಸಿದರು ನಿನ್ನ ಮಂದಹಾಸದಿ ವ್ಯಾಸಮುನಿಗಳು

---

1 ಅಂತರವಿಲ್ಲದೆ, ನಿರಂತರವಾಗಿ 2 ಬೀಜಾಕ್ಷರ (ತದ್ಭವ)

ಒಂದು ಕರದಲಿ ಜಪದ ಮಾಲೆ
ಒಂದು ಕರ ನಾಭಿ ಕೆಳಗೆ
ಚಂದದಿಂದ ಪದುಮಾಸನ-
ದಿಂದ ಕುಳಿತು ನಿತ್ಯ ನಿತ್ಯಾ-
ನಂದ ವಿಜಯವಿಠಲನ್ನ
ವಂದಿಸಿ ವರಗಳ ಕೊಡುತ
ಒಂದ ನರರ ಪಾಲಿಸುತ್ತ ॥ ೪ ॥

ಆದಿತಾಳ

ಭೂತ ಪ್ರೇತ ಪಿಶಾಚ ಪೀಡೆ
ವಾತ ಶೀತ ಜ್ವರ ಮಿಕ್ಕಾದ
ಯಾತನೆ ನಾನಾ ಕಠಿಣ ಭೀತಿ ಮತ್ತೆ
ಯಾತರ್‍ಯಾತರರ್ಥ-ಪೇಕ್ಷಿತ ತೆರದಲೆ
ಆತುರದಿಂದಲೆ ಕೊಟ್ಟು ಪಾತಕವ ಹರಿಸಿ
ಭೂತಭೃತ[1] ವಿಜಯವಿಠಲನ್ನ
ದೂತರೊಳು ಶ್ರೇಷ್ಠನೀತ ॥ ೫ ॥

ಜತೆ

ವ್ಯಾಸಮುನಿ ಪೂಜಿಪ ಯಂತ್ರೋದ್ಧಾರಕ ಹನುಮ
ಈಶನ ವಿಜಯವಿಠಲನ ದಾಸರ ಪ್ರೇಮ ॥

## ವ್ಯಾಸರಾಯರ ಸ್ತೋತ್ರಪದ

ರಾಗ ಆರಭಿ ಜಂಪೆ ತಾಳ

ನೀನೆ ವರಗುರು ಮುಖ್ಯಪ್ರಾಣ
ನಿರಂತರವು ನಂಬಿದೆನು ನಿಖಿಲಗುಣಪೂರ್ಣ ॥ ಪ ॥

ಜಾಣ ಕೋಮಲ ಭಾರತೀಶ । ನಿಖಿಲ
ಪ್ರಾಣಿಗಳ ಹೃದಯದಲಿ ವಾಸ । ಸುರೇಶ ॥ ಅನು ॥

ವಾತಸುತನಾಗಿ ರಘು । ನಾಥ ಪ್ರಿಯದೂತ ಬಲು
ಯೂಥ ಲಂಕೆಯ ಪೊಕ್ಕು । ಖ್ಯಾತಿಯನು ಪಡೆದೆ ।
ಸೀತೆಗುಂಗುರವಿತ್ತು । ವೀತಿಹೊತ್ರಗೆ[2] ಪುರವ
ಪ್ರೀತ್ಯೆನಿಸಿದಾತ ದಿತಿ-। ಜಾತರಿಗೆ ಭೀತಿಕರ ॥ ೧ ॥

---

1 ಜಗದ್ಧಾರಕ 2 ಅಗ್ನಿಗೆ

ಲಂಡ ಕೀಚಕ ಬಕನ । ಮಂಡೆಯನು ಒಡೆದು ಉ–
ದ್ದಂಡ ಮಗಧಾಧಿಪನ[1] । ದಂಡವನು ಸೀಳಿ ।
ಭಂಡ ಕೌರವರ ಶಿರ । ಚೆಂಡಾಡಿ ಪ್ರಬಲ ರಣ–
ಮಂಡಲದಿ ಚಂಡ ರಿಪು । ದಂಡುಗಳ ಖಂಡಿಸಿದೆ ॥ ೨ ॥

ಸಂಗದಲಿ ಮಧ್ವಮತ– । ದಂಗವನು ವಿರ್ಪಡಿಸಿ
ಕಂಗೆಟ್ಟ ಕುಮತ ದು– । ಸ್ಸಂಗಗಳನಳಿದು ।
ಗಂಗೆಪಿತ ಕೃಷ್ಣ ಪದ– । ಭೃಂಗ ಮೂಜಗದೊಳಗೆ
ತುಂಗ ಭವಭಂಗ ದಯಾ– । ಪಾಂಗ ಯತಿಪುಂಗವರ ॥ ೩ ॥

## ವಿಜಯದಾಸರ ಪದ

ರಾಗ ಬಿಲಹರಿ ಅಟ್ಟತಾಳ

ಎಂತು ವರ್ಣಿಸಲಮ್ಮ ಈ ಗುರುಗಳ ॥ ಪ ॥

ಯಂತ್ರೋದ್ಧಾರಕರಾಗಿ ಇಂತು ಮೆರೆವ ಯತಿಯ ॥ ಅನು ॥

ಕೋತಿರೂಪದಿ ಬಂದು ಭೂತಳಕ್ಕೆ ಬೆಡಗು ತೋರಿ
ಈ ತುಂಗಭದ್ರೆಯಲ್ಲಿ ಖ್ಯಾತರಾಗಿಪ್ಪ ಯತಿಯಂ ॥ ೧ ॥

ಸುತ್ತ ವಾನರ ಬದ್ಧ, ಮತ್ತೆ ವಲಯಾಕಾರ ಮಧ್ಯ
ಚಿತ್ರ ಕೋಣ ಆರರೊಳು ನಿತ್ಯದಲ್ಲಿ ಮೆರೆವ ಯತಿಯ ॥ ೨ ॥

ವ್ಯಾಸಮುನಿರಾಯರಿಂದ ಈ ಶಿಲೆಯೊಳಗೆ ನಿಂದ
ಶ್ರೀಶ ವಿಜಯವಿಠಲನ್ನ ಏಸು ಬಗೆ ಸ್ತುತಿಪನ್ನ ॥ ೩ ॥

## ಗೋಪಾಲದಾಸರ ಪದ

ರಾಗ ಆರಭಿ ತ್ರಿಪುಟತಾಳ

ಇದು ಏನೋ ಚರಿತ ಯಂತ್ರೋದ್ಧಾರ
ಇದು ಏನೋ ಚರಿತ ? ॥ ಪ ॥

ಇದು ಏನೋ ಚರಿತ ಶ್ರೀಪದುಮನಾಭನ ದೂತ
ಸದಾಕಾಲ ಸರ್ವರ ಹೃದಯಾಂತರ್ಗತನಾಗಿ ॥ ಅನು ॥

ವಾರಿಧಿ ಗೋಷ್ಪದ ನೀರಂತೆ ದಾಟಿದ
ಧೀರ ಯೋಗಾಸನ ಧಾರಿಯಾಗಿಪ್ಪುದು ॥ ೧ ॥

---

1 ಜರಾಸಂಧನ

ದುರುಳ ಕೌರವರನ್ನು ವರ ಗದೆಯಲಿ ಕೊಂದ
ಕರದಲಿ ಜಪಮಾಲೆ ಧರಿಸಿ ಎಣಿಸುವುದು ॥ ೨ ॥

ಹೀನ ಮತಗಳನ್ನು ವಾಣಿಲಿ ತರಿದಂಥ
ಜ್ಞಾನವಂತನೆ ಹೀಗೆ ಮೌನವಾಗಿಪ್ಪುದು ॥ ೩ ॥

ಸರ್ವವ್ಯಾಪಕ ನೀನು ಪೂರ್ವಿಕ ದೇವನೆ
ಶರ್ವನ ಪಿತ ಬಂದು ಪರ್ವತ ಸೇರಿದ್ದು ॥ ೪ ॥

ಗೋಪಾಲವಿಠಲಗೆ ನೀ ಪ್ರೀತಿ ಮಂತ್ರಿಯು
ವ್ಯಾಪಾರ ಮಾಡದೆ ಈ ಪರಿ ಕುಳಿತಿಹೆ ॥ ೫ ॥

## ಮೊದಲ ಕಲ್ಲು ಶೇಷದಾಸರ ಪದ

**ತೋಡಿ ಆದಿತಾಳ**

ನಂಬಿದೆ ನಿನ್ನ ಪಾದ । ಮುಖ್ಯಪ್ರಾಣ
ನಂಬಿದೆ ನಿನ್ನ ಪಾದ । ಡಂಭವ ತೊಲಗಿಸು
ಡಿಂಬದೊಳಗೆ ಹರಿಯ । ಬಿಂಬ ಪೊಳೆವಂತೆ ಮಾಡು ॥ ಅನು ॥

.......... .......... ..........

ಯೋಗಾಸನದೊಳಿಪ್ಪ । ಯಂತ್ರೋದ್ಧಾರಕ
ಭಾಗವತ ಜನರಪ್ಪ ॥
ಯೋಗಿಗಳೀಶ ವ್ಯಾಸ । ಯೋಗಿಗೊಲಿದ ನ್ಯಾಸ
ಶ್ರೀ ತುಂಗಭದ್ರಾ ವಾಸ । ಬಾಗುವೆ ಕೊಡು ಲೇಸ ॥
ಶ್ರೀಗುರುವಿಜಯವಿಠಲನ ಪಾದಕೆ
ಬಾಗಿದ ಭವದೂರ ಜಾಗರ ಮಾರುತೇ ॥ ೫ ॥

## ಮಧ್ವಪತಿ ಊಟಮಾಡಿಸಿದ್ದು

ಕಂದಗ್ಹೇಳಿದರು ಪುರಂದರದಾಸರು
ತಂದೆ ಹನುಮನ ಪೂಜೆ ಮಾಡಿ ಬಾರೆಂದು ॥ ಪ ॥

ಮಾತನು ಕೇಳಿ ತನ್ನ ಮಾತೆಯು ಬಳಿಗೆ ಬಂದು
ಪ್ರೀತಿಯಿಂ ನೈವೇದ್ಯ ತೆಗೆದುಕೊಂಡು
ಶ್ರೀ ತುಲಸಿ ಗಂಧ ಅಕ್ಷತೆಯಿಂದ ಪೂಜಿಸಿ
'ವಾತಜನೆ ಬಾಯ್ದೆರೆಯೊ ತುತ್ತನಿಕ್ಕುವೆ'ನೆಂದ ॥ ೧ ॥

ಏನುಪಚಾರವನು ಮಾಡೆ ಬಾಯ್ದೆರೆಯದಿರೆ
ಧ್ಯಾನಿಸುತ ಕೈಮುಗಿದು ನಿಂತುಕೊಂಡು

ಏನ ಕಾರಣದಿಂದ ತಂದೆ ನೀನುಣಲೊಲ್ಲೆ
ನಾನು ಮಾಡ್ದಪರಾಧವೇನಯ್ಯ ಹನುಮಾ ॥ ೨ ॥

ಹೀಗೆನ್ನಲಾವಾಗ ಬೇಗದಿಂ ಬಾಯ್ದೆರೆದು
ಆಗ ತುತ್ತುಂಡು ತಾ ತೇಗಿ ನಿಲಲು . . . .

ಜಯ ಜಯತು ಜಯತು ಶಿರಿವಿಠಲರಾಯನ ದೂತ
ಜಯತು ಯಂತ್ರೋದ್ಧಾರ ಮುಖ್ಯಪ್ರಾಣ ಜಯತು ॥

## ೩. ರಘುನಂದನತೀರ್ಥರು

**ವೃಂದಾವನಕ್ಕೆ ಹೋಗುವ ಹಾದಿ.** ಸೀತಾ (ಸೆರಗೆಂಬ) ಸರೋವರದ ಪಶ್ಚಿಮಕ್ಕೆ ಇರುವ ಹೊಲದ ಮಧ್ಯೆ ಒಂದು ಕಾಲುದಾರಿ ಗುಡ್ಡದ ಪಕ್ಕದಲ್ಲೇ ಹಾದು, ನದೀ ಕಡೆಗೆ ಹೋಗುತ್ತದೆ. ಈ ಹಾದಿಯಲ್ಲಿ ಸುಮಾರು ನೂರು ಮೀಟರ್ ಹೋದರೆ, ಮುಂದೆ ಎಡಗಡೆ (ದಕ್ಷಿಣದ ಕಡೆ) ದೊಡ್ಡ ಹಾಸು ಬಂಡೆಯ ಮೇಲೆ ಒಂದು ಮಂಟಪ ಕಾಣಿಸುತ್ತದೆ. ಅದರ ಹತ್ತಿರ ಹೋದರೆ ಅದರ ಹಿಂದಿರುವ ಗುಡ್ಡದ ಬದಿಯಲ್ಲಿ ಸುಮಾರು ಇಪ್ಪತ್ತು ಮೀಟರ್ ಹಿಂದೆ ಇನ್ನೊಂದು ಮಂಟಪ ಕಾಣಿಸುತ್ತದೆ. ಈ ಮಂಟಪದಲ್ಲೇ ರಘುನಂದನತೀರ್ಥರ ವೃಂದಾವನವಿದೆ. ಇದರ ಎದುರಿಗೆ ದಕ್ಷಿಣದ ಕಡೆ ನಾಲ್ಕು ಕೈಗಳಿರುವ ಹನುಮಂತನ ಮೂರ್ತಿಯಿದೆ.

ಅಥವಾ ಚಕ್ರತೀರ್ಥದ ಉತ್ತರಭಾಗದಿಂದಲೂ ಬಂಡೆಗಳನ್ನು ದಾಟುತ್ತಾ ಕೋಟಿಲಿಂಗಗಳ ಕೆಳಭಾಗದಲ್ಲಿ ಹಾದು ಅನಂತಶಯನ ವಿಗ್ರಹದ ಮುಂದಿನಿಂದಲೂ ಈ ವೃಂದಾವನದ ಬಳಿಗೆ ಬರಬಹುದು ; ಆದರೆ ಈ ದಾರಿ ಶ್ರಮಸಾಧ್ಯ.

**ಆರಾಧನೆ :** ರಘುನಂದನರ ಆರಾಧನೆ ಕಾರ್ತಿಕ ಬಹುಳ (ವದ್ಯ) ಅಷ್ಟಮೀ ಆಗುತ್ತದೆ. ಆ ಸಮಯದಲ್ಲಿ ಮಾತ್ರ ಇಲ್ಲಿ ಎರಡು ದಿನ ಪೂಜಾದಿಗಳು ನಡೆಯುವುವು. ಮಿಕ್ಕ ದಿವಸಗಳಲ್ಲಿ ಇಲ್ಲಿ ಜನ ಸಂಚಾರವೂ ಇರುವುದಿಲ್ಲ. ಅದಕ್ಕೂ ಹೆಚ್ಚಾಗಿ ಇಲ್ಲಿಗೆ ಬರುವುದೇ ಪ್ರಯಾಸಕರ.

**ರಘುನಂದನತೀರ್ಥರು** ರಾಘವೇಂದ್ರಸ್ವಾಮಿಗಳ ಮಠದ ಗುರುಪರಂಪರೆಗೆ ಸೇರಿದವರು. ಇವರು ಮಂತ್ರಾಲಯದ ರಾಯರಿಗೆ (ರಾಘವೇಂದ್ರಸ್ವಾಮಿಗಳಿಗೆ) ನಾಲ್ಕು ಪೀಳಿಗೆ ಹಿಂದಿನವರು. ಇವರ ಬಗ್ಗೆ ಹೆಚ್ಚಿನ ವಿಚಾರ ತಿಳಿಯಲು ಅಪೇಕ್ಷಿಸುವವರು "ಗುರು ಚರಿತ್ರೆ"ಯನ್ನು ನೋಡಬಹುದು.

### ರಘುನಂದರ ಚರಮಶ್ಲೋಕ

ಪರ್ವೈರಪಹೃತಾ ಮೂಲ–ರಾಮಾರ್ಚಾ ಗುರ್ವನುಗ್ರಹಾತ್ ।
ಯೇನಾನೀತಾ ನಮಸ್ತಸ್ಮೈ ರಘುನಂದನ ಭಿಕ್ಷವೇ ॥

## ೪. ಪುರಂದರದಾಸರು

ಪುರಂದರದಾಸರ ಮಂಟಪವು ವಿಜಯವಿಠಲನ ಗುಡಿಯ ನೈಋತ್ಯಕ್ಕೆ ನದಿಯ ದಡದಲ್ಲೇ ಇದೆ. ಸೀತಾಸರೋವರದ ಪಶ್ಚಿಮದ ಭಾಗದ ಅಂಚಿನಲ್ಲಿ ಉತ್ತರಕ್ಕೆ ಹೋಗುವ ಕಾಲು ದಾರಿಯಲ್ಲಿ ನಡೆದು ಈ ಮಂಟಪದ ಬಳಿಗೆ ಬರಬಹುದು ; ಇದು ನಡಿಗೆಯ ಹಾದಿ. ಪುರಂದರದಾಸರ ಮಂಟಪವು ರಘುನಂದನತೀರ್ಥರ ಮಂಟಪಕ್ಕೆ ನೇರವಾಗಿ ಉತ್ತರದಲ್ಲಿದೆ. ಅಥವಾ ವಿಠ್ಠಲನ ಗುಡಿಯ ಬಳಿ ಇರುವ ತುಲಾಭಾರದ ಪಶ್ಚಿಮಕ್ಕೆ ನದಿ ಕಡೆಗೆ ಹೋಗುವ ಬಂಡಿದಾರಿಯಲ್ಲೂ ಈ ಮಂಟಪದ ಬಳಿಗೆ ಬರಬಹುದು ; ಇದು ವಾಹನಗಳು ಬರುವ ಮಾರ್ಗ. ನದಿಯಲ್ಲಿ ಹೆಚ್ಚು ಪ್ರವಾಹ ಇದ್ದಾಗ ಮಂಟಪವು ನೀರಿನಲ್ಲಿಯೇ ಮುಳುಗಿ ಹೋಗಿರುವುದೂ ಉಂಟು ; ಆಗ ಮೇಲಿನ ಶಿಖರಮಾತ್ರ ಕಾಣಿಸುತ್ತಿರುತ್ತದೆ.

ದಾಸರಾಯರು ಈ ಮಂಟಪದಲ್ಲಿಯೇ ಏಕಾಂತವಾಗಿ ಕುಳಿತು ಆಹ್ನಿಕಾದ್ಯನುಷ್ಠಾನಗಳನ್ನು ಮಾಡಿಕೊಳ್ಳುತ್ತಿದ್ದರಂತೆ ; ವಿಜಯನಗರದ ಅರಸು ಕೃಷ್ಣದೇವರಾಯ ಇದಕ್ಕಾಗಿಯೇ ಇವರಿಗೆ ಈ ಮಂಟಪ ಕಟ್ಟಿಸಿಕೊಟ್ಟಿದ್ದನಂತೆ. ಅದರಿಂದಲೇ ಇದಕ್ಕೆ ಪುರಂದರದಾಸರ ಹೆಸರು ರೂಢವಾಗಿದೆ. ಈ ಮಂಟಪದ ಒಂದು ಕಲ್ಲು ಕಂಬದ ಮೇಲೆ ದಾಸವರ್ಯರ ಪ್ರತಿಮೆಯನ್ನೂ ಕೆತ್ತಿಸಿದೆ. ೧೯೬೦ರ ಸುಮಾರಿನಲ್ಲಿ ಹೊಸಪೇಟೆಯ ತಟ್ಟಿ ಕೃಷ್ಣರಾಯರೆಂಬ ಭಕ್ತರೊಬ್ಬರು ಮಹಾಜನಗಳ ನೆರವಿನಿಂದ ಈ ಮಂಟಪದ ಜೀರ್ಣೋದ್ಧಾರ ಮಾಡಿದರು.

**ದಾಸರ ಆರಾಧನೆ :** ಪುಷ್ಯಮಾಸದ ಅಮಾವಾಸ್ಯೆಯೇ ಪುರಂದರದಾಸರ ಆರಾಧನೆಯ ದಿನ. ಆ ದಿವಸ ಈ ಮಂಟಪದಲ್ಲೂ ಸಹ ದಾಸರ ಆರಾಧನೋತ್ಸವವು ಸಂಭ್ರಮದಿಂದ ಜರುಗುವುದು ; ನೂರಾರು ಜನರು ಭಾಗವಹಿಸುವರು. ೧೯೬೪ರಲ್ಲಂತೂ ದಾಸವರ್ಯರ ನಾಲ್ಕನೇ ಶತಮಾನೋತ್ಸವವು ಈ ಆವರಣದಲ್ಲಿ ಬಹಳ ವೈಭವದಿಂದ ಆಚರಿಸಲ್ಪಟ್ಟಿತು. ಇತ್ತೀಚೆಗೆ ಈ ಪರಿಸರದಲ್ಲೇ ನಡೆದ ಅಗೆತ (excavation) ದಲ್ಲಿ ದಾಸರಾಯರದೆಂದು ಊಹಿಸಲಾದ ಒಂದು ಪ್ರತಿಮೆಯು ದೊರಕಿದೆ ; ಅದನ್ನು ಹತ್ತಿರದಲ್ಲೇ, ವಿಠ್ಠಲನ ಗುಡಿಯ ಪೂರ್ವಕ್ಕಿರುವ ಮತ್ತೊಂದು ಗುಡಿಯಲ್ಲಿ ಪ್ರದರ್ಶನಕ್ಕಾಗಿ ಇಟ್ಟಿದ್ದಾರೆ.

ಪುರಂದರದಾಸರು ಕನ್ನಡ ಹರಿದಾಸರಲ್ಲೆಲ್ಲಾ ಅಗ್ರಣಿಗಳೂ ಅತ್ಯಂತ ಪ್ರಸಿದ್ಧರೂ ಆದ ಕೀರ್ತನಕಾರರು. ಇವರು ಮೊಟ್ಟಮೊದಲಲ್ಲಿ ಕೋಟ್ಯಾಧೀಶರಾಗಿದ್ದರೆಂದೂ ಅನಂತರ ವೈರಾಗ್ಯವನ್ನು ತಾಳಿ ಸಕಲವನ್ನೂ ದಾನಮಾಡಿ 'ತರುಣಿ ಮಕ್ಕಳ ಸಹಿತ' ಹಂಪೆಗೆ ಬಂದು ಹರಿದಾಸರಾದರು. ಇವರು ವ್ಯಾಸರಾಯರು, ಕನಕದಾಸರು, ಕೃಷ್ಣದೇವರಾಯ, ಅಚ್ಯುತರಾಯ ಇವರೆಲ್ಲರ ಸಮಕಾಲೀನರು. ಶ್ರೀ ವ್ಯಾಸರಾಯರೇ ಇವರಿಗೆ 'ಅಂಕಿತ'ವನ್ನಿತ್ತರು. ಅಂಕಿತಪಡೆದ ದಾಸರು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಸುಳಾದಿ ಉಗಾಭೋಗಗಳನ್ನು ರಚಿಸಿ ಸಾರಸ್ವತ ಸೇವೆ ಸಲ್ಲಿಸಿದರು. ಹೀಗೆ ತಮ್ಮ ಕೀರ್ತನೆಗಳ

ರಚನೆಯಿಂದ ಕರ್ನಾಟಕ ಸಂಗೀತಕ್ಕೆ ತಳಪಾಯ ಹಾಕಿದ ಕಾರಣ ಇವರು ಕರ್ನಾಟಕ ಸಂಗೀತ ಪಿತಾಮಹರೆಂದು ಸಮ್ಮಾನಿತರಾಗಿದ್ದಾರೆ. ಹೀಗೆ ಕನ್ನಡ ನುಡಿಗೂ ಸಾಹಿತ್ಯಕ್ಕೂ ಅಪಾರಸೇವೆ ಸಲ್ಲಿಸಿ ಶಕೆ ೧೪೮೬ನೇ ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಶನಿವಾರ (ಕ್ರಿ. ಶ. ೧೫೬೪) "ನಿಜವೈಕುಂಠಕ್ಕೆ ತೆರಳಿದರು." ಪುರಂದರದಾಸರು ನಾರದಾಂಶಸಂಭೂತರೆಂದು ಅವರ ಶಿಷ್ಯಾಗ್ರೇಸರರಾದ ವಿಜಯದಾಸರು ಅನೇಕ ಪದಗಳಲ್ಲಿ ಕೊಂಡಾಡಿದ್ದಾರೆ.

## ೫. ನರಹರಿತೀರ್ಥರು

**ವೃಂದಾವನ ಎಲ್ಲಿದೆ ?** ವಿಜಯವಿಠ್ಠಲನ ಗುಡಿಯ ಹಿಂದೆ (ವಾಯವ್ಯದ ಕಡೆ) ನದೀಮಧ್ಯದಲ್ಲಿರುವ ಒಂದು ಸಣ್ಣ ಗುಡ್ಡದ ಮೇಲೆ ನರಹರಿತೀರ್ಥರ ವೃಂದಾವನವು ಸ್ಥಾಪಿತವಾಗಿದೆ. ಆದಕಾರಣ ಈ ವೃಂದಾವನದ ದರ್ಶನವಾಗುವುದೇ ದೊಡ್ಡ ಭಾಗ್ಯದಂತಿದೆ. ವಿಠ್ಠಲನ ಗುಡಿಯ ಉತ್ತರಪ್ರಾಕಾರದ ಮಗ್ಗುಲಲ್ಲಿ ನದೀ ಕಡೆಗೆ ಹೋಗುವ ಒಂದು ಬಂಡಿರಸ್ತೆಯು ಎರಡು ಮಂಟಪಸಾಲುಗಳ ಮಧ್ಯೆ ಹಾದು ಹೋಗಿದೆ. ಈ ರಸ್ತೆಯಲ್ಲಿ ನೇರವಾಗಿ ನದೀದಡದ ವರೆಗೂ ಹೋದರೆ ಕೊನೆಯಲ್ಲಿ ಒಂದು ಮಂಟಪ ಸಿಗುತ್ತದೆ. ಅದರ ಬಳಿ ನಿಂತು ಚೆನ್ನಾಗಿ ಗಮನಿಸಿದರೆ ನದೀ ಮಧ್ಯದಲ್ಲಿ ಗುಡ್ಡದ ಮೇಲಿರುವ ವೃಂದಾವನವು ಕಾಣಿಸುತ್ತದೆ. ಈ ಭಾಗದ ನದಿಯಲ್ಲಿ ಸೆಳೆತ ಹೆಚ್ಚಾಗಿರುವುದರಿಂದ ವೃಂದಾವನದ ಬಳಿಗೆ ಹೋಗಲು ತೆಪ್ಪದ (ದೋಣಿಯ) ಸಹಾಯ ಸಾಮಾನ್ಯವಾಗಿ ಬೇಕೇ ಆಗುತ್ತದೆ. ಏಪ್ರಿಲ್ ಮೇ ತಿಂಗಳುಗಳಲ್ಲಿ ನದಿಯಲ್ಲಿ ಹೆಚ್ಚು ನೀರಿರುವುದಿಲ್ಲವಾದ್ದರಿಂದ ಆಗ ಕಾಲುನಡಿಗೆಯಿಂದಲೂ ವೃಂದಾವನದ ಬಳಿಗೆ ಹೋಗಬಹುದು. ಏನೇ ಆದರೂ ಸ್ಥಳದ ಪರಿಚಯವುಳ್ಳ ಒಬ್ಬರೊಡನೆ ಹೋಗುವುದೇ ಸೂಕ್ತ. ನರಹರಿತೀರ್ಥರ ಆರಾಧನೆ ಪುಷ್ಯ ಬಹುಳ ಸಪ್ತಮೀ ನಡೆಯುತ್ತದೆ ; ಆಗ ನೂರಾರು ಜನರು ನೆರೆಯುವರು. ಈ ಸಮಯದಲ್ಲಿ ಸ್ವಾಮಿಗಳ ದರ್ಶನವು ಅತಿಸುಲಭವಾಗಿ ಆಗುವುದು.

**ನರಹರಿತೀರ್ಥರು** (೧೩೨೪–೧೩೩೩) ಶ್ರೀಮನ್ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಲ್ಲೊಬ್ಬರು, ಮತ್ತು ಗುರುಪರಂಪರೆಯಲ್ಲಿ ಅವರಿಂದ ಮೂರನೆಯವರು. ಇವರು ಪದ್ಮನಾಭತೀರ್ಥರ (೧೩೨೪) ಬಳಿಕ ಪೀಠಕ್ಕೆ ಬಂದರು. ಪೂರ್ವಾಶ್ರಮದಲ್ಲಿ ಇವರು ಶಾಮಶಾಸ್ತ್ರಿಗಳಾಗಿದ್ದರಂತೆ. ಇವರು ಪ್ರಸಂಗವಶಾತ್ ಹನ್ನೆರಡು ವರ್ಷ ಕಳಿಂಗ ದೇಶದಲ್ಲಿ ರಾಜ್ಯಭಾರಮಾಡಿದ್ದರೆಂಬುದು ಶ್ರೀಕೂರ್ಮಂ ಗುಡಿಯಲ್ಲಿರುವ ಅವರ ಅನೇಕ ಶಾಸನಗಳಿಂದ ತಿಳಿದು ಬರುತ್ತದೆ. ಆ ಶಾಸನಗಳ ಒಕ್ಕಣೆಯು Epigraphica Indica, Vol VI ನಲ್ಲೂ South Indian Inscriptions, Vol.V ನಲ್ಲೂ ಪ್ರಕಟವಾಗಿವೆ. ಆ ಗಜಪತಿರಾಜನ ಬೊಕ್ಕಸದಲ್ಲಿದ್ದ ಬ್ರಹ್ಮಕರಾರ್ಚಿತವಾದ ಮೂಲಸೀತಾರಾಮರ ಪ್ರತಿಮೆಗಳನ್ನು ಇವರೇ ಶ್ರೀಮದಾಚಾರ್ಯರಿಗೆ ತಂದುಕೊಟ್ಟರೆಂಬುದು ಇವರ ಚರಮಶ್ಲೋಕದಿಂದ ಗೊತ್ತಾಗುತ್ತದೆ. ನರಹರಿತೀರ್ಥರೂ ಶ್ರೀಮದಾಚಾರ್ಯರ ಅನೇಕ ಗ್ರಂಥ

ಗಳಿಗೆ ಟೀಕೆಗಳನ್ನು ಬರೆದಿದ್ದಾರೆಂದು ತಿಳಿದು ಬಂದಿದೆ. ಶಕೆ ೧೧೩೬ ನೇ (ಕ್ರಿ. ಶ. ೧೩೩೩) ಶ್ರೀಮುಖ ಸಂವತ್ಸರದ ಪುಷ್ಯ ಬಹುಳ ಸಪ್ತಮೀ ದಿವಸ ಇವರು ಹರಿಪದವನ್ನೈದಿದರು. ಇವರ ವೃಂದಾವನ ಪ್ರತಿಷ್ಠೆಯು ವಿಜಯನಗರ ಸ್ಥಾಪನೆ (೧೩೩೬) ಗಿಂತಲೂ ಮೂರು ವರ್ಷ ಮೊದಲೇ ಆಗಿತ್ತು.

### ನರಹರಿತೀರ್ಥರ ಚರಮ ಶ್ಲೋಕಗಳು

ಸಸೀತಾ ಮೂಲರಾಮಾರ್ಚಾ ಕೋಶೇ ಗಜಪತೇಃ ಸ್ಥಿತಾ ।
ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ ॥ ೧ ॥

ವ್ಯಾಸರಾಜಮಠದ (ಸೋಸಲೆ) ರೀತ್ಯಾ—

ಭೂದೇವೀತನಯಾಸಕ್ತ—ರಘ್ವೀಶಪದಮಾನಸಃ ।
ನೃಹರ್ಯಾಖ್ಯಗುರುರ್ಭೂಯಾ—ದಸ್ಮದಿಷ್ಟಾರ್ಥಸಿದ್ಧಯೇ ॥ ೨ ॥

(ಭೂದೇವೀತನಯಾ=ಸೀತಾದೇವಿ)

## ೬. ನವವೃಂದಾವನ

**ಏನು ? ಎಲ್ಲಿದೆ ? :** ಆನೆಗೊಂದಿಗೆ ಈಶಾನ್ಯ ದಿಕ್ಕಿನಲ್ಲಿ ತಾರಾಪರ್ವತದ ಎದುರಿಗೆ ನದೀ ಮಧ್ಯೆ ಒಂದು ನಡುಗಡ್ಡೆಯಿದೆ. ಇದರ ಪಶ್ಚಿಮದ ಅಂಚಿನಲ್ಲಿ ಕಾಲಾದ್ರಿ ಅಥವಾ ಕಾಲಕೂಟಾದ್ರಿಯೆಂಬ ಗುಡ್ಡವಿದೆ. ಕಾಲಕೂಟಾದ್ರಿಯ ಹಿಂಬದಿಯಲ್ಲಿ ತುಂಗಭದ್ರಾನದಿಯು ಎರಡು ಸೀಳಾಗಿ ಒಡೆದು ನಡುಗಡ್ಡೆಯನ್ನು ಸುತ್ತಲೂ ಬಳಸಿ ಹರಿದಿದೆ. ಇದರಲ್ಲಿ ಉತ್ತರಭಾಗದ ಸೀಳಿಗೆ ಪುಣ್ಯಕೋಟಿತೀರ್ಥವೆಂದೂ ದಕ್ಷಿಣಭಾಗದ ಸೀಳಿಗೆ ವಿರಜಾತೀರ್ಥವೆಂದೂ ಹೆಸರು. ಕಾಲಕೂಟಾದ್ರಿಯ ಮುಂಬದಿಯಲ್ಲಿ (ಪೂರ್ವದ ಕಡೆ) ವೈಷ್ಣವ ಪಂಥದ ಪ್ರಸಿದ್ಧ ಸನ್ಯಾಸಿಗಳ ಒಂಭತ್ತು ವೃಂದಾವನಗಳು ಒಂದೇ ಹೊರ ಆವರಣದಲ್ಲಿ ರಚಿಸಲ್ಪಟ್ಟಿವೆ. ಆದ್ದರಿಂದ ಈ ನಡುಗಡ್ಡೆಗೆ ನವ-ವೃಂದಾವನವೆಂಬ ಹೆಸರು ಅನ್ವರ್ಥವಾಗಿ ರೂಢವಾಗಿ ಬಂದಿದೆ. ವೈಷ್ಣವರಿಗೆ ಇದೊಂದು ಪಾವನತಮ ಪುಣ್ಯಕ್ಷೇತ್ರವಾಗಿದೆ. ಈ ಸನ್ಯಾಸಿಗಳ ಪರಿಚಯ ಮಾಡಿಸುವುದಕ್ಕೆ ಮೊದಲು ನವವೃಂದಾವನಕ್ಕೆ ಹೋಗಲು ಏನು ಸೌಕರ್ಯವಿದೆ, ನೋಡೋಣ ಬನ್ನಿ.

**ಆನೆಗೊಂದಿಗೆ ಬರುವ ಮಾರ್ಗ.** ನವವೃಂದಾವನಕ್ಕೆ ಹೋಗಬೇಕಾದರೆ ಮೊದಲು ಆನೆಗೊಂದಿಗೇ ಬರಬೇಕು. ಆನೆಗೊಂದಿಗೆ, ಹೊಸಪೇಟೆಯಿಂದಲೂ *ಗಂಗಾವತಿ* ಯಿಂದಲೂ ಬರಬಹುದು. ಹೊಸಪೇಟೆಯಿಂದ ತಳವಾರಗಟ್ಟೆಗೆ ಪ್ರತಿನಿತ್ಯ ರಾಜ್ಯದ ಸಾರಿಗೆ ಸಂಸ್ಥೆಯ ಬಸ್ಸುಗಳು ಓಡಾಡುವುವು. ಈ ಬಸ್ಸಿನಲ್ಲಿ ತಳವಾರಗಟ್ಟೆಗೆ ಬಂದು ಹರಿಗೋಲಿನಲ್ಲಿ ನದೀ ದಾಟಿದರೆ ಆನೆಗೊಂದಿಗೆ ಬರುತ್ತೇವೆ (ನದೀಘಾಟನಿಂದ ಗ್ರಾಮವು ಸುಮಾರು ಒಂದು ಕಿ.ಮೀ. ದೂರದಲ್ಲಿದೆ) ಇದು ಆನೆಗೊಂದಿಗೆ ಬರಲು ಅತಿ ಸಮೀಪದ ಮಾರ್ಗ. ಈ ಮಾರ್ಗದಲ್ಲಿ ಆನೆಗೊಂದಿ ಹೊಸಪೇಟೆಯಿಂದ ಕೇವಲ ೧೭ ಕಿ.ಮೀ. ದೂರ

ವಾಗುತ್ತದೆ. ನದಿಯನ್ನು ದಾಟದೆ ನೇರವಾಗಿ ವಾಹನಗಳಲ್ಲಿ ಆನೆಗೊಂದಿಗೆ ಬರಲು ಇಚ್ಛಿಸುವವರು ಮುನಿರಾಬಾದ್ ಅಗಳಕೆರಾ ಸಾಣಾಪುರಗಳ ಮಾರ್ಗವಾಗಿ ಜೀ.ಪಿ.ಎಂ. ರಸ್ತೆಯಲ್ಲೋ (ಈ ದೂರ ೪೦ ಕಿ.ಮೀ. ಆಗುವುದು) ಅಥವಾ ಕಂಪ್ಲಿ–ಗಂಗಾವತಿಗಳ ಮಾರ್ಗದಲ್ಲೋ (ಈ ದೂರ ಸುಮಾರು ೫೨ ಕಿ.ಮೀ. ಆಗುವುದು) ಬರಬಹುದು. ಆದರೆ ಎತ್ತ ಕಡೆಯಿಂದ ಬಂದರೂ ನವವೃಂದಾವನಕ್ಕೆ ಮಾತ್ರ ನದೀ ದಾಟಿಯೇ ಹೋಗಬೇಕು. ಅದಕ್ಕೇನು ಸೌಕರ್ಯಗಳಿವೆ ನೋಡೋಣ, ನಡೆಯಿರಿ.

**ದರ್ಶನಕ್ಕೆ ಸೌಕರ್ಯ :** ನವವೃಂದಾವನವು ನಡುಗಡ್ಡೆಯಾದ್ದರಿಂದ ಅಲ್ಲಿಗೆ ಯಾವ ಕಡೆಯಿಂದ ಹೋದರೂ ನದೀ ದಾಟಲೇಬೇಕು. ದಾಟಿಹೋದರೂ ಅದು ನಿರ್ಜನ ಪ್ರದೇಶವಾದುದರಿಂದ ಅಲ್ಲಿ ಜನವಸತಿಯಾಗಲಿ ಮನೆಮಠಗಳಾಗಲೀ ಇಲ್ಲ ; ಅಷ್ಟೇಕೆ ! ಹೆಚ್ಚು ಜನರು ಬಂದರೆ ನೆರಳು ಸಹ ಇಲ್ಲ. ಯಾತ್ರಾರ್ಥಿಗಳು ಇಲ್ಲಿಗೆ ಬಂದು ದರ್ಶನ ಮಾಡಿಕೊಂಡು ಹಿಂದಿರುಗಬೇಕೆ ವಿನಾ ಅಲ್ಲಿ ಇರುವ ಅಥವಾ ಹೆಚ್ಚಿನ ಸೌಕರ್ಯ ಬೇಡುವ ಪ್ರಸಂಗವೇ ಇಲ್ಲ. ಇನ್ನು, ನದಿಯನ್ನು ಆನೆಗೊಂದಿಯ ಬಳಿಯಿಂದಲೋ ಬುಕ್ಕಸಾಗರ ಅಥವಾ ವೆಂಕಟಾಪುರದ ಕಡೆಯಿಂದಲೋ ದಾಟಿಹೋಗಲು ಸಾಧ್ಯವಿದೆ. ಆದರೂ ಇತರ ಕಡೆಗಳಿಗಿಂತ ಆನೆಗೊಂದಿಯಿಂದ ದಾಟುವುದೇ ಹೆಚ್ಚು ಅನುಕೂಲ ; ಇಲ್ಲಿ ನದೀ ದಾಟಲು ಹೆಚ್ಚಿನ ಸೌಕರ್ಯಗಳೂ ಇವೆ, ದಾಟಿಸುವ ಜನರೂ ಸಿಗುವರು. ಆರಾಧನೆಗಳ ಕಾಲದಲ್ಲಂತೂ ಇಲ್ಲಿ ನದೀ ದಾಟಿಸಲು ವಿಶೇಷ ವ್ಯವಸ್ಥೆ ಇರುವುದು. ಆದರೆ ನದಿಯಲ್ಲಿ ಪೂರ್ಣ ಪ್ರವಾಹವಿದ್ದಾಗ ಮಾತ್ರ ಅಲ್ಲಿಗೆ ಹೋಗುವ ಮಾತೇ ಇಲ್ಲ.

**ವೃಂದಾವನಗಳು ಯಾವುವು? :** ಜಗನ್ನಾಥದಾಸರಾಯರೇ "ವೃಂದಾವನಗಳಿ ಗಾನವಿಂಪೆ" ಎಂಬ ಒಂದು ಪದದಲ್ಲಿ ಈ ಒಂಬತ್ತು ವೃಂದಾವನಗಳ ಹೆಸರನ್ನು ಉಲ್ಲೇಖಿಸಿದ್ದಾರೆ. ಇಲ್ಲಿರುವವರಲ್ಲೆಲ್ಲಾ ಶ್ರೀ ಪದ್ಮನಾಭತೀರ್ಥರೇ (ಕ್ರಿ.ಶ. ೧೩೨೪) ಮೊಟ್ಟ ಮೊದಲನೆಯವರು. ಅನಂತರ ಕಾಲಕ್ರಮದಲ್ಲಿ (೨) ಕವೀಂದ್ರತೀರ್ಥರು (೧೩೯೯), (೩) ವಾಗೀಶತೀರ್ಥರು (೧೪೦೭), (೪) ಗೋವಿಂದ ಒಡೆಯರು (೧೫೩೪), (೫) ಶ್ರೀವ್ಯಾಸರಾಯರು (೧೫೩೯), (೬) ರಘುವರ್ಯರು (೧೫೫೮), (೭) ಶ್ರೀನಿವಾಸತೀರ್ಥರು (೧೫೬೪), (೮) ರಾಮತೀರ್ಥರು (೧೫೮೪) ಮತ್ತು (೯) ಸುಧೀಂದ್ರತೀರ್ಥರು (೧೬೨೪) ಹೀಗೆ ಈ ಯತಿವರೇಣ್ಯರ ವೃಂದಾವನಗಳಾದುವು. ಈ ಒಂಬತ್ತು ಯತಿಗಳಲ್ಲಿ ಎಲ್ಲರೂ ಮಠಾಧಿಪತಿಗಳು, ಗೋವಿಂದ ಒಡೆಯರೊಬ್ಬರು ಬಿಡಿಸನ್ಯಾಸಿಗಳಾದ ಪ್ರಯುಕ್ತ ಅವರ ಹೆಸರನ್ನು ಕಡೆಯಲ್ಲಿ ಹೇಳುವುದು ವಾಡಿಕೆ. ಈ ಒಂಭತ್ತು ಹೆಸರುಗಳನ್ನು ನೆನಪಿಟ್ಟುಕೊಳ್ಳಲು ಈ ಕೆಳಗಿನ ಶ್ಲೋಕವು ಅನುಕೂಲವಾಗಿದೆ :

ಪದ್ಮನಾಭಂ ಕವೀಂದ್ರಂ ಚ ವಾಗೀಶಂ ವ್ಯಾಸರಾಜಕಮ್
ರಘುವರ್ಯಂ ಶ್ರೀನಿವಾಸಂ ರಾಮತೀರ್ಥ, ತಥೈವ ಚ ।
ಶ್ರೀಸುಧೀಂದ್ರಂ ಚ ಗೋವಿಂದಂ ನವವೃಂದಾವನಂ ಭಜೇ ॥

## ಜಗನ್ನಾಥದಾಸರ ನವವೃಂದಾವನಗಳ ಪದ

(ಈ ಪದವು ಶ್ರೀ ವೇಣುಗೋಪಾಲದಾಸರ ಕೃಪೆಯಿಂದ ನನಗೆ ದೊರೆಯಿತು)

ರಾಗ ಕಾಂಬೋದಿ ಝಂಪೆ ತಾಳ

ವೃಂದಾವನಗಳಿಗಾ ನಮಿಪೆ ನಿತ್ಯಾ ॥ ಪ ॥

ನಂದತೀರ್ಥರ ಮತೋದ್ಧಾರಕರೆನಿಪ ನವ — ॥ ಅನು ॥

ವರ ಮಧ್ವಮುನಿ ವಿಮಲ ಕರಪದ್ಮ ಸಂಜಾತ
ಗುರು ಪದ್ಮನಾಭ, ರಾಮರ, ಕವೀಂದ್ರ, ತತ್-
ಕರಸರೋರುಹ ಜಾತ ವಾಗೀಶ ಮುನಿಪ ರಘು-
ವರ್ಯ, ಗೋವಿಂದಾಖ್ಯರೊಡೆಯರ ಪವಿತ್ರತಮ ॥ ೧ ॥

ಶ್ರೀ ಸುರೇಂದ್ರಾರ್ಯರ ಪ್ರಪುತ್ರರೆನಿಪ ಸುಧೀಂದ್ರ
ವ್ಯಾಸರಾಯರ, ಶ್ರೀನಿವಾಸಮುನಿಯ।
ಭೂಸುರರು ಪರಮ ಸಂತೋಷದಲಿ ಸ್ಮರಿಸೆ ನಿರ್-
ದೋಷರನೆ ಮಾಡಿ ಅಭಿಲಾಷೆ ಪೂರೈಸುತಿಹ ॥ ೨ ॥

ದೇವತೆಗಳಿವರು ಸಂದೇಹ ಪಡೆ ಸಲ್ಲ, ಮಿ-
ಥ್ಯಾವಾದಿಗಳ ಪರಾಭವರ ಮಾಡಿ।
ಈ ವಸುಂಧರೆಯೊಳಗೆ ಕೀರ್ತಿಯುತರಾಗಿ ಲ-
ಕ್ಷ್ಮೀವರ ಜಗನ್ನಾಥವಿಠಲನ್ನೈದಿಹರ ॥ ೩ ॥

ನವಯತಿವರೇಣ್ಯರ ನಾಮಸ್ಮರಣೆ ಮಾಡಿದ ಬಳಿಕ ಕಿಂಚಿತ್ತಾದರೂ ಅವರ ಮಾಹಿತಿ (ಪರಿಚಯ) ಮಾಡಿಕೊಳ್ಳಬೇಕಲ್ಲವೇ ?

## ನವವೃಂದಾವನಗಳ ಪರಿಚಯ

೧. ಶ್ರೀ ಪದ್ಮನಾಭತೀರ್ಥರು ಶ್ರೀಮನ್ಮಧ್ವಾಚಾರ್ಯರಿಂದಲೇ ಸನ್ಯಾಸದೀಕ್ಷೆ ಪಡೆದ ಅವರ ಸಾಕ್ಷಾಚ್ಛಿಷ್ಯರು ಮತ್ತು ಅವರ ಅನಂತರ ಆ ಗುರುಪೀಠವನ್ನು ಅಲಂಕರಿಸಿದ ಮೊಟ್ಟ ಮೊದಲನೆಯ ಮಾಧ್ವ ಗುರುಗಳು. ಹೀಗೆ ಪದ್ಮನಾಭತೀರ್ಥರು ಮಾಧ್ವರ ಮೂರು ಮಠಗಳಿಗೂ ಮೂಲ ಗುರುಗಳು. ಇವರ ಪೂರ್ವಾಶ್ರಮದ ಹೆಸರು ಶೋಭನ ಭಟ್ಟರೆಂದೂ ಇವರು ಗೋದಾವರೀ ತೀರದವರೆಂದೂ ತಿಳಿದು ಬಂದಿದೆ. ಶ್ರೀಮದಾಚಾರ್ಯರ ಗ್ರಂಥಗಳಿಗೆ ಟೀಕೆ ಬರೆದವರಲ್ಲಿ ಇವರೇ ಮೊಟ್ಟಮೊದಲಿಗರಾದ್ದರಿಂದ ಇವರನ್ನು ಆದ್ಯಟೀಕಾಕಾರರೆಂದು ಕರೆಯುವುದುಂಟು. ಇವರ ಟೀಕಾಗ್ರಂಥಗಳಲ್ಲಿ ಸತ್ತರ್ಕರತ್ನಾವಳಿಯೆಂಬ ಸೂತ್ರಭಾಷ್ಯದ ಟೀಕೆಯೂ, ಅನುವ್ಯಾಖ್ಯಾನದ ಟೀಕೆಯಾದ ಸನ್ನ್ಯಾಯ ರತ್ನಾ

ವಳಿಯೂ ಮುಖ್ಯವಾದುವು. ಮಾಧ್ವರಲ್ಲಿ ಟೀಕಾಚಾರ್ಯರೆಂದು ಖ್ಯಾತರಾಗಿರುವ ಶ್ರೀಮಜ್ಜಯತೀರ್ಥರೇ "ಇವರ ಗ್ರಂಥಗಳ ಸಹಾಯವಿಲ್ಲದೆ ತತ್ತ್ವಮಾರ್ಗದಲ್ಲಿ ಪ್ರವೇಶಿಸುವುದಕ್ಕೆ ಸಾಧ್ಯವಿಲ್ಲ"ವೆಂದೂ, ಇವರು ಶ್ರೀಮನ್ಮಧ್ವಾಚಾರ್ಯರನ್ನು ಸಾಕ್ಷಾತ್ತಾಗಿ ಸೇವಿಸಿ ಅದರಿಂದ ಲಬ್ಧವಾದ "ವಿದ್ಯಾಸುಧಾಂಭೋನಿಧಿ"ಗಳೆಂದೂ, 'ಕೃಪಾಳುಗಳಾದ ಇವರ "ಕೃಪಾಲವ"ವು (ಎಳ್ಳಷ್ಟು ಕೃಪೆಯು) ನನ್ನ ಮೇಲೆ ನಿತ್ಯವೂ ಇರಲೆಂದೂ ಪ್ರಾರ್ಥಿಸಿದ್ದಾರೆ. ಇದೇ ರೀತಿ ಶ್ರೀಮಧ್ವ್ಯಾಸರಾಯರು "ಚಂದ್ರಿಕಾ" ಗ್ರಂಥದಲ್ಲಿ ಇವರನ್ನು ಸ್ಮರಿಸುತ್ತಾ ಇವರ ವದನವು ಶಾರದಾದೇವಿಯು ನಲಿದಾಡುವ 'ಶಾರದಾಂಬುರುಹ' (ಕಮಲ) ದಂತಿದೆಯೆಂದು ಹೇಳಿ ಇವರು 'ಸರ್ವಶಾಸ್ತ್ರವಿಶಾರದ'ರೆಂದು ಸ್ತುತಿಸಿ ನಮಿಸಿದ್ದಾರೆ. ಇವರು ಶಾ. ಶ. ೧೨೪೬ನೇ ರಕ್ತಾಕ್ಷಿ ಸಂವತ್ಸರದ ಕಾರ್ತೀಕ ಬಹುಳ ಚತುರ್ದಶೀ ದಿನ (ಕ್ರಿ.ಶ. ೧೩೨೪) ಪಾರ್ಥಿವ ದೇಹವನ್ನು ತ್ಯಜಿಸಿದರು.

**೨. ಕವೀಂದ್ರತೀರ್ಥರು** ಶ್ರೀಮದಾಚಾರ್ಯರಿಂದ ಗುರುಪೀಳಿಗೆಯಲ್ಲಿ ಎಂಟನೆಯವರು. ಇವರ ಪೂರ್ವಾಶ್ರಮದ ಹೆಸರು ಸೇತುಮಾಧವಾಚಾರ್ಯರು. ಇವರಿಗೆ ಟೀಕಾಚಾರ್ಯರ ಶಿಷ್ಯರಾದ ವಿದ್ಯಾಧಿರಾಜರಿಂದ ಸನ್ಯಾಸದೀಕ್ಷೆಯಾಯಿತು. ಆ ವಿದ್ಯಾಧಿರಾಜರು ಇಬ್ಬರಿಗೆ—ಮೊದಲು ರಾಜೇಂದ್ರರಿಗೂ ಅನಂತರ ಈ ಕವೀಂದ್ರರಿಗೂ ಸನ್ಯಾಸ ದೀಕ್ಷೆ ಕೊಟ್ಟಿದ್ದರಿಂದ ಇವರ ಕಾಲದಲ್ಲೇ ಮಾಧ್ವಗುರು ಪರಂಪರೆಯು ಎರಡು ಶಾಖೆಗಳಾಗಿ ಒಡೆಯಿತಲ್ಲದೆ ಎರಡು ಮಠಗಳೂ ಆರಂಭವಾದುವು. ಇವರು ಶಕೆ ೧೩೨೧ನೇ ಪ್ರಮಾಥಿಸಂವತ್ಸರ, ಚೈತ್ರ ಶುಕ್ಲ ನವಮೀ (ರಾಮನವಮೀ) ದಿವಸ (ಕ್ರಿ.ಶ. ೧೩೯೯) ಕಳೇಬರತ್ಯಾಗಮಾಡಿದರು.

**೩. ವಾಗೀಶತೀರ್ಥರು** ಕವೀಂದ್ರತೀರ್ಥರ ಶಿಷ್ಯರು. ಇವರ ಪೂರ್ವಾಶ್ರಮದ ಹೆಸರು ರಘುನಂದನಾಚಾರ್ಯರು. ಇವರು "ಪದವ್ಯಾಖ್ಯಾನಕುಶಲ"ರಾಗಿದ್ದರೆಂದು ಅವರ ಚರಮ ಶ್ಲೋಕ ಹೇಳುತ್ತದೆ. ಇವರು ಎಂಟು ವರ್ಷ ವೇದಾಂತಸಾಮ್ರಾಜ್ಯವನ್ನು ಆಳಿ ಶಾ. ಶ. ೧೩೨೯ನೇ ಚೈತ್ರ ಕೃಷ್ಣ ತದಿಗೆ (ಕ್ರಿ.ಶ. ೧೪೦೭) ದೇಹೋತ್ಕ್ರಮಣ ಮಾಡಿದ್ದರು. ಕವೀಂದ್ರರೂ, ವಾಗೀಶರೂ ರಾಯರ ಮಠ–ಉತ್ತರಾದಿ ಮಠ ಎರಡು ಪರಂಪರೆಗಳಲ್ಲೂ ಬರುವರು. (ಉಡುಪಿ ಅಷ್ಟಮಠಗಳಿಗೆ ಸೇರಿದ ಸೋದೆ ಮಠದಲ್ಲೂ ಒಬ್ಬರು ವಾಗೀಶರಿದ್ದಾರೆ. ಅವರೇ ಬೇರೆ, ಇವರೇ ಬೇರೆ.)

**೪. ಶ್ರೀವ್ಯಾಸರಾಯರ** ಹೆಸರನ್ನು ಕೇಳರಿಯದ ಕನ್ನಡಿಗರು ಯಾರಿದ್ದಾರೆ ? ಇವರು ಪ್ರಹ್ಲಾದಾಂಶಸಂಭೂತರೆಂದೂ ಇವರಲ್ಲಿ ಶೇಷಾವೇಷವಿತ್ತೆಂದೂ ಪುರಂದರ ದಾಸರು ವಿಜಯದಾಸಾದಿ ಅಪರೋಕ್ಷ ಜ್ಞಾನಿಗಳು ಪದ–ಸುಳಾದಿಗಳಲ್ಲಿ ಹೇಳಿದ್ದಾರೆ. ಒಂದು ದಾನಶಾಸನದಲ್ಲೂ ಸಹ "ಶೇಷಾಯ ನರವೇಷಾಯ" ಎಂದು ಇದೇ ಅಂಶವನ್ನು ಸೂಚಿಸಿದೆ. (ವ್ಯಾಸರಾಯರೇ ಮುಂದೆ ಮಂತ್ರಾಲಯದ ರಾಘವೇಂದ್ರಸ್ವಾಮಿಗಳಾದರೆಂದು ತಿಳಿದವರು ಹೇಳುತ್ತಾರೆ.) ಉದ್ದಾಮಪಂಡಿತರೆಂದು ಖ್ಯಾತರಾದ ಶ್ರೀಪಾದ ರಾಯರಲ್ಲಿ ವಿದ್ಯಾಭ್ಯಾಸ ಮಾಡಿ ವ್ಯಾಸರಾಯರು ಸಂಸ್ಕೃತದಲ್ಲೂ ಕನ್ನಡದಲ್ಲೂ ದಿಗ್ದಂತಿ

ಪಂಡಿತರಾಗಿದ್ದರಲ್ಲದೆ ಭಾರತದಲ್ಲೆಲ್ಲ ಸಂಚಾರಮಾಡಿ "ಕಾಶಿಗದಾಧರಮಿಶ್ರ, ಪಕ್ಷಧರ ವಾಸುದೇವ . . . ನಾರಸಿಂಹಯೋಗಿ ಲಿಂಗಣ್ಣಮಿಶ್ರನೆ ಮೊದಲಾದ ವಿದ್ವಾಂಸ ರನ್ನು ವಾದದಲ್ಲಿ ಗೆದ್ದು ಅವರಿಂದ "ನೂರೆಂಟು ಜಯಪತ್ರಿಕೆಯನ್ನು ವಾಸುದೇವ ಗೋಪಾಲ ಕೃಷ್ಣಗೆ ಭೂಷಣವ ಮಾಡಿಸಿ" ಹಾರ ಹಾಕಿದರೆಂದು ಪುರಂದರದಾಸರು ಸ್ತುತಿಸಿದ್ದಾರೆ. ಮಾಧ್ವರ ವಾದಗ್ರಂಥಗಳಲ್ಲೆಲ್ಲ ಅತ್ಯಂತ ಪ್ರೌಢವಾದ ನ್ಯಾಯಾಮೃತ, ತಾತ್ಪರ್ಯ ಚಂದ್ರಿಕಾ ಮತ್ತು ತರ್ಕತಾಂಡವಗಳನ್ನು ಇವರೇ ರಚಿಸಿದ್ದಾರೆ. ಆದ್ದರಿಂದ ಅವುಗಳನ್ನು 'ವ್ಯಾಸತ್ರಯ'ಗಳೆಂದು ಕರೆಯುವುದುಂಟು. 'ಚಂದ್ರಿಕಾ'ಕ್ಕೆ ಟಿಪ್ಪಣಿ ಬರೆಯುವ ಸಂದರ್ಭ ದಲ್ಲಿ ರಾಘವೇಂದ್ರಸ್ವಾಮಿಗಳು ಇವರನ್ನು "ಪದವಾಕ್ಯಪ್ರಮಾಣಜ್ಞ"ರೆಂದೂ "ಸಂಪ್ರದಾ ಯಾರ್ಥಕೋವಿದ"ರೆಂದೂ ದುರ್ವಾದಿಗಳೆಂಬ ಹಾವುಗಳಿಗೆ ಗರುಡನಂತಿದ್ದಾರೆಂದೂ ಸ್ತುತಿಸಿದ್ದಾರೆ. 'ತಾತ್ಪರ್ಯಚಂದ್ರಿಕೆ'ಯನ್ನು ರಚಿಸಿದ ಕಾರಣ ವ್ಯಾಸರಾಯರನ್ನು "ಚಂದ್ರಿಕಾಚಾರ್ಯ"ರೆಂದೂ ಕರೆಯುವುದುಂಟು.

ಶ್ರೀಪಾದರಾಯರಂತೆ ವ್ಯಾಸರಾಯರೂ ಸಹ ಕನ್ನಡಾಭಿಮಾನಿಗಳೂ ಆಗಿದ್ದ ರಲ್ಲದೆ ಕನ್ನಡದಲ್ಲಿಯೂ ಅನೇಕ ಕೀರ್ತನೆಗಳನ್ನು ಶ್ರೀಕೃಷ್ಣ ಎಂಬ ಅಂಕಿತದಿಂದ ರಚಿಸಿದ್ದಾರೆ. ಕನ್ನಡ ಹರಿದಾಸ ಸಾಹಿತ್ಯದಲ್ಲಿ ಅಗ್ರಗಣ್ಯರಾದ ಪುರಂದರದಾಸರು ಕನಕ ದಾಸರುಗಳಿಗೂ ಇವರೇ ಜ್ಞಾನೋಪದೇಶ ಮಾಡಿದ "ಗುರುಗಳು." ಈ ದೃಷ್ಟಿಯಿಂದ ಕನ್ನಡಸಾಹಿತ್ಯವು ಇವರಿಗೆ ಚಿರಋಣಿಯಾಗಿದೆ.

ಯಾವ ಜನಾಂಗದಲ್ಲೇ ಆಗಲಿ ವೈರಾಗ್ಯ ಮಾರ್ಗದಲ್ಲಿ ಪ್ರವೃತ್ತರಾದವರು ಮುಳ್ಳಿನ ಹಾಸಿಗೆಯಂತಿರುವ ರಾಜಕಾರ್ಯಗಳಲ್ಲಿ ಕೈಹಾಕುವುದು ಅತಿ ವಿರಳ. ನಮ್ಮ ದೇಶದ ಇತಿಹಾಸದಲ್ಲಿ ಅಂತಹ ಸವ್ಯಸಾಚಿಗಳೂ ವಿದ್ಯಾರಣ್ಯರು ರಾಮದಾಸರು ಶ್ರೀಪಾದರಾಯರು ಮೊದಲಾದ ಅನೇಕರು ಆಗಿಹೋಗಿದ್ದಾರೆ. ಶ್ರೀಮದ್ವ್ಯಾಸರಾಜರೂ ಈ ಗುಂಪಿಗೆ ಸೇರಿದವರು. ಸಾಳುವ ನರಸಿಂಹನ ಕಾಲದಿಂದಲೇ ವ್ಯಾಸರಾಯರು ವಿಜಯ ನಗರದಲ್ಲಿ ರಾಜಗುರುಗಳಾಗಿ ಇರಲಾರಂಭಿಸಿದ್ದರು; ಕೃಷ್ಣದೇವರಾಯ ಅಚ್ಯುತರಾಯರ ಕಾಲದವರೆಗೂ ಅವರಿಗೆ ಇದೇ ಗೌರವವಿತ್ತು. ವಿಜಯವಿಠಲನ ಗುಡಿಯಲ್ಲಿರುವ ಒಂದು ದಾನಶಾಸನದಲ್ಲಿ ಶ್ರೀ ಕೃಷ್ಣದೇವರಾಯನು "ಗುರುವುಗಳು ವ್ಯಾಸರಾಯರಿಗೆ ಪಾಲು ೧" ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ರಾಯನಿಗೆ ಬಂದಿದ್ದ **ಕುಹುಯೋಗ** (ಹಾವು ಕಚ್ಚಿ ಸಾಯುವ ಗಂಡಾಂತರ)ವನ್ನು ಪರಿಹರಿಸಲು ವ್ಯಾಸರಾಯರು ಆ ವಿಷ ಘಳಿಗೆಯು ಕಳೆಯುವ ವರೆಗೆ ತಾವೇ ಆ ರತ್ನಸಿಂಹಾಸನವನ್ನೇರಿದ್ದರೆಂದು ಪುರಂದರ ದಾಸರ ಸುಳಾದಿಯಿಂದ ತಿಳಿದು ಬರುತ್ತದೆ. (ಈ ಘಟನೆಯ ದ್ಯೋತಕವಾಗಿ ಇಂದಿಗೂ ಶ್ರೀ ವ್ಯಾಸರಾಜ ಮಠದಲ್ಲಿ ಪ್ರತಿ ನಿತ್ಯ ರಾತ್ರಿವೇಳೆ ದರ್ಬಾರೂ ದೀವಟಿಗೆ ಸಲಾಮೂ ನಡೆಯುತ್ತವೆ.) ಪಯೇಜನೆಂಬ ವಿದೇಶಿ ಯಾತ್ರಿಕನು ಶ್ರೀ ಕೃಷ್ಣದೇವರಾಯನು ಒಬ್ಬ ಯತಿಯ ಸಲಹೆಗಳನ್ನು ಆಗಾಗ್ಗೆ ತೆಗೆದುಕೊಳ್ಳುತ್ತಿದ್ದನೆಂದು ಬರೆದಿದ್ದಾನೆ. ಆ ಯತಿ ಗಳೇ ಈ ವ್ಯಾಸರಾಯರೆಂದು ಇತಿಹಾಸ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಹೀಗೆ

ವ್ಯಾಸರಾಯರು ವೇದಾಂತ ಸಾಮ್ರಾಜ್ಯದಲ್ಲಿ ಹೇಗೋ ರಾಜಕೀಯದಲ್ಲೂ ಹಾಗೆಯೇ ಗೌರವಿಸಲ್ಪಡುತ್ತಿದ್ದು ಶಕೆ ೧೪೬೦ ನೇ ವಿಳಂಬೀ ಸಂವತ್ಸರದ ಫಾಲ್ಗುಣ ಬಹುಳ (ವದ್ಯ) ಚತುರ್ಥೀ ದಿನ (ಕ್ರಿ. ಶ. ೧೫೩೯) ಶನಿವಾರ ಪರಲೋಕಕ್ಕೆ "ಚಿತ್ತೈಸಿದ"ರು.

೫. **ಶ್ರೀರಘುವರ್ಯತೀರ್ಥರು** ಉತ್ತರಾದಿ ಮಠದ ಪರಂಪರೆಗೆ ಸೇರಿದವರು. ಇವರು ಮಳಖೇಡದಲ್ಲಿ ನೆಲೆಸಿರುವ ರಘುನಾಥತೀರ್ಥರ ಶಿಷ್ಯರೂ ದಕ್ಷಿಣದಲ್ಲಿ ತಿರುಕ್ಕೊಯಿಲೂರಿನಲ್ಲಿರುವ ಭಾವಬೋಧಕಾರರೆಂದು ಪ್ರಸಿದ್ಧರಾದ ರಘೂತ್ತಮಸ್ವಾಮಿಗಳ ಗುರುಗಳೂ ಆಗಿದ್ದಾರೆ. ಇವರ ಚರಮಶ್ಲೋಕದಿಂದ ಪೂರ್ಣಪ್ರವಾಹದಲ್ಲಿ ಹರಿಯುತ್ತಿದ್ದ ಭೀಮಾ ನದಿಯು ಇವರಿಗೆ ದಾರಿಬಿಟ್ಟುಕೊಟ್ಟಿತ್ತೆಂದು ತಿಳಿದುಬರುತ್ತದೆ. ತಂತ್ರಸಾರದ ಛಲಾರಿ ಟೀಕೆಯಲ್ಲಿ ರಘುವರ್ಯರು ರಚಿಸಿದ ಮಂತ್ರಗಳ ವರ್ಣನ್ಯಾಸಗಳ ಶ್ಲೋಕಗಳನ್ನು ಉದಹರಿಸುವುದರಿಂದ ಇವರು ಮಂತ್ರಗಳಲ್ಲಿ ಸಿದ್ಧಹಸ್ತರಿರಬೇಕೆಂದು ಊಹಿಸಬಹುದಾಗಿದೆ. ಇವರಿಗೆ ಕ್ರಿ. ಶ. ೧೫೫೭ ಕ್ಕೆ ಸಲ್ಲುವ ಶಕೆ ೧೪೭೯ ನೇ ಪಿಂಗಳ ಸಂ॥ ಜ್ಯೇಷ್ಠ ಬಹುಳ ತದಿಗೆ ದಿವಸ ದೇಹೋತ್ಕ್ರಮಣವಾಯಿತು.

೬. **ಶ್ರೀನಿವಾಸತೀರ್ಥರು** ವ್ಯಾಸರಾಯರ ಶಿಷ್ಯರು. ಪೂರ್ವಾಶ್ರಮದಲ್ಲಿ ಅವರ ಅಕ್ಕನ ಮಗನಾಗಬೇಕಂತೆ. ಇವರ ಹೆಸರು ೧೫೭೬ನೇ ಇಸವಿಯ ಒಂದು ಕುಂದಾಪುರದ ಶಾಸನದಲ್ಲಿ ಉಲ್ಲೇಖವಾಗಿರುವುದರಿಂದ ಇವರಿಗೆ ೧೫೭೬ಕ್ಕೆ ಮೊದಲೇ ಸನ್ಯಾಸ ದೀಕ್ಷೆಯಾಗಿತ್ತೆಂದು ತಿಳಿಯುತ್ತದೆ. ಇವರು ೧೫೬೪ ರಲ್ಲಿ (ವೈಶಾಖ ಬಹುಳ ಪಂಚಮಿ) ವೃಂದಾವನಸ್ಥರಾದರು.

೭. **ರಾಮತೀರ್ಥರು** ಶ್ರೀನಿವಾಸತೀರ್ಥರ ಶಿಷ್ಯರು. ಇವರು ಇಪ್ಪತ್ತು ವರ್ಷ ಪೀಠದಲ್ಲಿದ್ದು ೧೫೮೪ ರಲ್ಲಿ (ಆಶ್ವಿಜ ಶುಕ್ಲ ಚತುರ್ದಶೀ) ದೇಹೋತ್ಕ್ರಮಣ ಮಾಡಿದರು.

೮. **ಶ್ರೀ ಸುಧೀಂದ್ರ ತೀರ್ಥ**ರು ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳಿಗೆ ವೇದಾಂತವನ್ನು ಬೋಧಿಸಿದ ವಿದ್ಯಾಗುರುಗಳೂ ಸನ್ಯಾಸದೀಕ್ಷೆಯನ್ನು ಕೊಟ್ಟ ಆಶ್ರಮ ಗುರೂಗಳೂ ಸಹ ಆಗಿದ್ದಾರೆ. ಸುಧೀಂದ್ರರು ಅರುವತ್ತು ನಾಲ್ಕು ಕಲೆಗಳಲ್ಲೂ ಪ್ರವೀಣರೆಂದು ಪ್ರಸಿದ್ಧರಾಗಿದ್ದ ವಿಜಯೀಂದ್ರ (ಕುಂಭಕೋಣದ) ಸ್ವಾಮಿಗಳ ಶಿಷ್ಯರು. ಇಂಥಾ ಗುರುಗಳ ಶಿಷ್ಯ—ಅಂಥಾ ಗುರುಗಳ ಗುರು—ಎಂದ ಮೇಲೆ ಸುಧೀಂದ್ರರು ಎಂಥಾ ವಿದ್ವಾಂಸರಿರಬೇಕೆಂಬುದು ತನಗೇ ತಾನೇ ವ್ಯಕ್ತವಾಗುತ್ತದೆ. ಇವರು 'ಕುಶಾಗ್ರಮತಿ'ಗಳಾಗಿದ್ದರೆಂದೂ ವಾದಿಗಳಿಗೆ 'ಭೀತಿ'ಯಾಗಿದ್ದರೆಂದೂ ಇವರ ಚರಮಶ್ಲೋಕ ಹೇಳುತ್ತದೆ. ವೇದಾಂತಶಾಸ್ತ್ರದಲ್ಲೇ ಅಲ್ಲದೆ ಕಾವ್ಯಶಾಸ್ತ್ರದಲ್ಲೂ ಈ ಸ್ವಾಮಿಗಳು ಸಿದ್ಧಹಸ್ತರಾಗಿದ್ದರೆಂಬುದಕ್ಕೆ ಅವರು ರಚಿಸಿರುವ ಕೆಲವು ಅಲಂಕಾರ ಮತ್ತು ನಾಟಕ ಗ್ರಂಥಗಳೇ ಸಾಕ್ಷಿಯಾಗಿವೆ. ಗದ್ಯಲೇಖನದಲ್ಲಂತೂ ಇವರು ಎತ್ತಿದ ಕೈ. ಇವರಿಗೆ ವಿಜಯನಗರದ (ಆರವೀಡು ವಂಶದ) ಒಬ್ಬ ಅರಸು ಕನಕಾಭಿಷೇಕ ಮಾಡಿಸಿದ್ದನೆಂದು ಗೊತ್ತಾಗುತ್ತದೆ. ಇವರು ಕ್ರಿ. ಶ. ೧೬೨೩ಕ್ಕೆ ಸರಿಯಾದ ರುಧಿರೋದ್ಗಾರಿ ಸಂ॥ ಫಾಲ್ಗುಣ ಬಹುಳ ಬಿದಿಗೆ ದೇಹೋತ್ಕ್ರಮಣ ಮಾಡಿದರು.

೯. ಗೋವಿಂದ ಒಡೆಯರು ಬಿಡಿ ಸನ್ಯಾಸಿಗಳಾದ್ದರಿಂದ ಎಲ್ಲರಿಗಿಂತಲೂ ಕಡೆಯಲ್ಲಿ ಅವರ ಹೆಸರು ಹೇಳುವುದು ವಾಡಿಕೆಯೆಂದು ಹಿಂದೆಯೇ ತಿಳಿಸಿದೆಯಷ್ಟೆ. ಮೊದಲು ಇವರು ಸ್ಮಾರ್ತ ಬ್ರಾಹ್ಮಣರಾಗಿದ್ದರೆಂದೂ ಆಮೇಲೆ ವ್ಯಾಸರಾಯರಿಂದ ವೈಷ್ಣವ ದೀಕ್ಷೆಯನ್ನೂ ಅನಂತರ ಸನ್ಯಾಸದೀಕ್ಷೆಯನ್ನು ಪಡೆದರೆಂದೂ, ಕೊನೆಗೆ ವ್ಯಾಸರಾಯರು ಇದ್ದ ಕಾಲದಲ್ಲೇ ಕ್ರಿ.ಶ. ೧೫೩೪ ರಲ್ಲಿ ಫಾಲ್ಗುಣ ಬಹುಳ ಪಂಚಮಿಯಂದು ದೇಹತ್ಯಾಗ ಮಾಡಿದರೆಂದೂ ವ್ಯಾಸರಾಯರ ಸನ್ನಿಧಿಯಲ್ಲೇ ಇರಲು ಅವರ ಅಪ್ಪಣೆ ಕೇಳಿಕೊಂಡಿದ್ದರಿಂದ ನವವೃಂದಾವನದಲ್ಲಿ ನೆಲೆಸಲು ಇವರಿಗೆ ಅವಕಾಶ ಸಿಕ್ಕಿತೆಂದೂ ಹೇಳಿಕೆಯಿದೆ.

**ವಾದಿರಾಜರ ಉದ್ಗಾರ :** ವಾದಿರಾಜ ಸ್ವಾಮಿಗಳು ಈ ಸ್ಥಳಕ್ಕೆ ಭೇಟ್ಟಿಕೊಟ್ಟಾಗ ಈ ಒಂಭತ್ತು ವೃಂದಾವನಗಳ ಪೈಕಿ ಸುಧೀಂದ್ರರ ವೃಂದಾವನ ಇರಲಿಲ್ಲ. ಎಂಟೇ ವೃಂದಾವನಗಳಿದ್ದುವು. ಅದನ್ನು ನೋಡಿ ಅವರು

ರಾಜಧಾನೀ ಜಯತಿ ಸಾ ಗಜಗಹ್ವರಸಂಜ್ಞಿತಾ ।
ಯತ್ರ ಭಾಂತಿ ಗಜಾ ಮಾಧ್ವ-ರಾದ್ಧಾಂತಧರಣೀಧರಾಃ ॥

ಎಂದು ತಮ್ಮ ತೀರ್ಥಪ್ರಬಂಧದಲ್ಲಿ ಬರೆದಿದ್ದಾರೆ. ಅಂದರೆ—ಮಾಧ್ವ ಸಿದ್ಧಾಂತವೆಂಬ ಭೂಮಿಯನ್ನು ಹೊತ್ತಿರುವ ಈ ಅಷ್ಟದಿಗ್ಗಜಗಳು ಪರಿಶೋಭಿಸುವ ಆನೆಗೊಂದಿ ರಾಜಧಾನಿಯು ಜಯಶಾಲಿಯಾಗಿದೆ ಎಂದಿದ್ದಾರೆ ವಾದಿರಾಜರು. ಅಂತೂ ಪದ್ಮನಾಭತೀರ್ಥಾದಿಗಳು ಮಧ್ವಸಿದ್ಧಾಂತದ ದಿಗ್ಗಜಗಳೆಂದು ಹೇಳಿದಂತಾಯಿತು.

**ಅಪೂರ್ವ ಸಂಯೋಗ :** ಪ್ರಪಂಚದಲ್ಲಿ ಎಷ್ಟೋ ಮಂದಿ ಮಹನೀಯರು ಎಷ್ಟೋ ಕಡೆ ನೆಲೆಸಿದ್ದಾರೆ. ಆದರೆ ಈ ರೀತಿ ನವದಿಗ್ಗಜಗಳಂಥಾ ಮಹನೀಯರು ಒಂದೇ ಕಡೆ ಒಂದು ಚಿಕ್ಕ ಆವರಣದಲ್ಲಿ ನೆಲೆಸಿರುವುದು ಸಾಮಾನ್ಯವಾದ ಸಂಗತಿಯಲ್ಲ, ಇದು ನವರತ್ನಗಳನ್ನು ಒಂದೇ ಕಡೆ ಜೋಡಿಸಿಟ್ಟಂತೆ, ನವಗ್ರಹಗಳು ಏಕರಾಶಿಯಲ್ಲಿ ಸೇರಿದಂತೆ ಅಥವಾ ನವವಿಧ ಭಕ್ತಿಗಳು ಏಕೀಭವಿಸಿದಂತೆ ಅತ್ಯಾಶ್ಚರ್ಯಕರವಾಗಿದೆ. ವಿಚಾರಮಾಡಿ ನೋಡಿದರೆ ಈ ಸ್ಥಳದ ಮಹಿಮೆಯೇ ಇದಕ್ಕೆ ಹಿನ್ನೆಲೆಯಾಗಿದೆಯೆಂದು ಗೊತ್ತಾಗುತ್ತದೆ. ನಮಗೆ ತಿಳಿದಮಟ್ಟಿಗೆ ಈ ಸ್ಥಳದ ಪ್ರಾಕೃತಿಕ ಸನ್ನಿವೇಶಗಳೂ ಜೊತೆಗೆ ಇದರ ಪ್ರಾಚೀನ ಮಹತ್ವವೂ ಇದರ ಪ್ರಾಶಸ್ತ್ಯಕ್ಕೆ ಕಾರಣಗಳಾಗಿವೆ.

**ಪ್ರಾಕೃತಿಕ ಸೊಬಗು :** ಲೋಕದಲ್ಲಿ ಮನಶ್ಶಾಂತಿಗೆ ಎಷ್ಟೋ ಸಾಧನಗಳಿದ್ದರೂ ಪ್ರಾಕೃತಿಕ ಸೌಂದರ್ಯದಿಂದ ಲಭಿಸುವ ಶಾಂತಿಯು ಬೇರೆ ಯಾವ ಕೃತಕ ಸಾಧನಗಳಿಂದಲೂ ದೊರೆಯಲಾರದು. ಪ್ರಕೃತಿಯ ಸೊಬಗು ಮನಃಕ್ಲೇಶವೆಲ್ಲವನ್ನು ಪರಿಹರಿಸುವುದಲ್ಲದೆ ಚಿತ್ತಕ್ಕೆ ಆಹ್ಲಾದವನ್ನೂ ಉಂಟುಮಾಡುವುದು. ಇದನ್ನು ತಿಳಿದೇ ನಮ್ಮ ಪ್ರಾಚೀನ ಮಹರ್ಷಿಗಳು ಜನಸಂದಣಿಯಿಂದ ದೂರ ಸರಿದು ತಪೋವನಗಳಲ್ಲಿ ನೆಲೆಸುತ್ತಿದ್ದರು. ಪ್ರಕೃತ ನವವೃಂದಾವನವಾದರೂ ಬಹು ಪುರಾತನ ಕಾಲದಿಂದಲೂ ಒಂದು ತಪೋವನವೇ ಆಗಿದೆ. ಇದು ನಡುಗಡ್ಡೆಯಾದ್ದರಿಂದ ಇಲ್ಲಿಗೆ ನದೀ ದಾಟಿಯೇ ಬರ

ಬೇಕಲ್ಲವೆ ? ಅದು ಒಂದು ರೀತಿ ಲೌಕಿಕ ಜಂಜಾಟವನ್ನೇ ದಾಟಿಬಂದಂತೆ ಭಾಸವಾಗುತ್ತದೆ. ಅದರ ಜೊತೆಗೆ ಸುತ್ತಲೂ ಹರಿಯುತ್ತಿರುವ ನದಿ ; ಸುತ್ತ ಮುತ್ತ ಎತ್ತ ನೋಡಿದರೂ ಸಾಲಾಗಿ ಹಬ್ಬಿರುವ ಗುಡ್ಡಗಳು ; ಕಣ್ಣಿನ ಓಟ ಓಡುವವರೆಗೂ ಹುಲುಸಾಗಿ ಬೆಳೆದ ಹಚ್ಚನೆಯ ಪೈರಿನ, ಮರಗಿಡಗಳ ಮನೋಹರ ದೃಶ್ಯ; ಜೊತೆಗೆ ಜನಸಂದಣಿಯ ಗೊಂದಲವಿಲ್ಲದ ಪ್ರಶಾಂತ ವಾತಾವರಣ. ಇವುಗಳ ಮಧ್ಯೆ ನಿಂತರೆ ಮನುಷ್ಯನು ತನ್ನನ್ನು ತಾನೇ ಮರೆತುಬಿಡುವನು. ಈ ಸ್ಥಳಕ್ಕೆ ಎಷ್ಟೋ ಸಹಸ್ರಾರುಮಂದಿ—ನಾನಾ ಪಂಗಡದವರು, ನಾನಾ ಅಭಿರುಚಿಗಳುಳ್ಳವರು—ಬಂದುಹೋಗಿದ್ದಾರೆ. ಯಾರೇ ಬಂದರೂ ಇಲ್ಲಿಯ ನೈಸರ್ಗಿಕ ವೈಭವಕ್ಕೆ ಮೆಚ್ಚದೆ, ಮೆಚ್ಚಿ ಬೆರಗಾಗದೆ, ಬೆರಗಾಗಿ 'ಆಹಾ ! ಎಂತಹ ರಮ್ಯವಾದ ಸ್ಥಳ ! ಎಷ್ಟು ಪ್ರಶಾಂತವಾದ ವಾತಾವರಣ !' ಎಂದು ಉದ್ಗಾರ ಮಾಡದೆ ಹೋದವರಿಲ್ಲ.

**ತಪಸ್ಸಿದ್ಧಿಯ ಸಾಮಗ್ರಿಗಳು :** ಕೇವಲ ಪ್ರಾಕೃತಿಕ ಸೊಬಗು ಮಾತ್ರವೇ ಅಲ್ಲ ; ಇಲ್ಲಿಯ ಪರಿಸರ ಸನ್ನಿವೇಶ ಪ್ರತಿಯೊಂದೂ ತಪಸ್ಸಿದ್ಧಿಗೆ ಸಾಧಕವಾಗಿವೆ. ಹೇಗೆಂದರೆ ಶ್ರೀಮದಪ್ಪಣಾಚಾರ್ಯರು ರಾಘವೇಂದ್ರ ಸ್ತೋತ್ರದ 'ಪುರಶ್ಚರಣ ವಿಧಿ' ಯಲ್ಲಿ ಅಪ್ಪಣೆ ಕೊಡಿಸಿರುವಂತೆ

**ಗೋಷ್ಠೇ ವೃಂದಾವನೇಽಶ್ವತ್ಥೇ ಪುರಶ್ಚರಣಮೀರಿತಮ್ ।**
**ಗೋಷ್ಠೇ ದಶಗುಣಂ ವಿಂದ್ಯಾತ್, ಶತಂ ವೃಂದಾವನೇ ತಥಾ ॥**
**ಅಶ್ವತ್ಥೇ ತ್ರಿಶತಂ ಪ್ರೋಕ್ತಂ, ಪರ್ವತಾಗ್ರೇ ತು ಪಂಚಕಮ್ ।**
**ನದೀತೀರೇ ಸ್ವಾಯುತಂ ಹಿ ಪುಣ್ಯಕ್ಷೇತ್ರೇ ತು ಲಕ್ಷಕಮ್ ॥**

(ಸ್ವಾಯುತಂ=ಹತ್ತು ಸಾವಿರದಷ್ಟು ಅಧಿಕ)

ತಪಸ್ಸಿದ್ಧಿಗೆ ಗೋಷ್ಠ (ದನಗಳನ್ನು ಕಟ್ಟುವ ಸ್ಥಳ) ಅಶ್ವತ್ಥವೃಕ್ಷ ಪರ್ವತದ ತಪ್ಪಲು ನದೀ ತೀರ ಮೊದಲಾದುವು ಒಂದಕ್ಕಿಂತ ಒಂದು ಅಧಿಕಾಧಿಕ ಫಲಪ್ರದವಾದ ಸಾಮಗ್ರಿಗಳು. ನವವೃಂದಾವನದಲ್ಲಿಯಾದರೋ ಈ ಎಲ್ಲ ಸಾಮಗ್ರಿಗಳೂ (ಅಶ್ವತ್ಥವೃಕ್ಷ ಮಾತ್ರ ಇಲ್ಲ) ಸುಮ್ಮನೆ 'ಇರುವುದು' ಮಾತ್ರವಲ್ಲ—ನಿಬಿಡವಾಗಿ ಏಕೀಭವಿಸಿವೆ. ಒಂದು ಕಡೆ ನದಿಯಾಗಲಿ, ಬೆಟ್ಟವಾಗಲಿ, ಇದ್ದರೇ ಸಾಕೆನ್ನುವಾಗ ಇಲ್ಲಿ ಅವೆರಡೂ ಇರುವುದಲ್ಲದೆ ಸುತ್ತಮುತ್ತಲೂ ಇರುವುವು. ಜೊತೆಗೆ ನವವೃಂದಾವನವು ಪಂಪಾಕ್ಷೇತ್ರದ ಈಶಾನ್ಯ ಭಾಗಕ್ಕೆ ಸೇರಿರುವುದರಿಂದ ಇದು ಪುಣ್ಯಕ್ಷೇತ್ರವೂ ಸಹ ಆಗಿದೆ. ಅಷ್ಟೇ ಅಲ್ಲ. ಭರತ ಖಂಡದ ಪುಣ್ಯತಮವಾದ ಹದಿನಾರು ಸ್ಥಳಗಳ ಪೈಕಿ ಪಂಪಾಕ್ಷೇತ್ರವೂ ಒಂದು ಎಂದು ಭಾಗವತದಲ್ಲಿ (ಸಪ್ತಮ ಸ್ಕಂಧ, ೧೫ನೇ ಅಧ್ಯಾಯ) ಹೇಳಿರುವುದರಿಂದ ಇದು ಪುಣ್ಯತಮವೂ ಹೌದು.

**ಪಾವನವಾದ ಪರಿಸರಗಳು :** ಸ್ಥಳಮಾತ್ರವಲ್ಲ. ಅದರ ಪರಿಸರಗಳೂ ಪುಣ್ಯಮಯವಾದುವು. ಪರಮೇಶ್ವರನು ಕುಡಿದ ವಿಷವು ಈ ಗಡ್ಡೆಯಲ್ಲಿರುವ ಕಾಲಕೂಟಾ

ದ್ರಿಯ ಮೇಲೆ ಜೀರ್ಣವಾಯಿತಂತೆ. ಪುಣ್ಯಕೋಟಿ ತೀರ್ಥದ ಬಳಿ ಮಾಡುವ ಕಿಂಚಿತ್ ಪುಣ್ಯವೇ ನೂರು ಕೋಟಿಯಷ್ಟು ಅಧಿಕವಾಗುವುದೆಂದು ಪಂಪಾಮಾಹಾತ್ಮ್ಯ (ಸ್ಕಾಂದ ಪುರಾಣ)ದಲ್ಲಿ ಹೇಳಿದೆ.

**ಕಿಂಚಿದತ್ರ ಕೃತಂ ಪುಣ್ಯಂ ಶತಕೋಟಿಗುಣಂ ಭವೇತ್ ||**

ವಿರಜಾತೀರ್ಥದಲ್ಲಿ ಮಾಡುವ ಸ್ನಾನ ದಾನಗಳಿಂದ ಸದ್ಗತಿಯಾಗುವುದೆಂಬುದು

**ಅತ್ರ ಸ್ನಾನೇನ ದಾನೇನ ನರಾ ಯಾಂತಿ ಪರಾಂ ಗತಿಮ್**

ಎಂಬ ಪುರಾಣವಾಕ್ಯದಿಂದ ತಿಳಿದುಬರುತ್ತದೆ. ಬೃಹಸ್ಪತಿಯ ಪತ್ನಿಯಾದ ತಾರಾದೇವಿ ತಪಸ್ಸು ಮಾಡಿದ ಸ್ಥಳವೇ ತಾರಾಪರ್ವತ. ಕಾಲಾದ್ರಿಗೆ ಹಿಂಭಾಗದಲ್ಲಿ ಗಾಲವ ಮತ್ತು ಸುತೀಕ್ಷ್ಣ ಎಂಬ ಋಷ್ಯಾಶ್ರಮಗಳೂ ಇನ್ನೂ ಹಿಂದೆ ಕಪಿಲಾಶ್ರಮವೂ ಇದ್ದುವು. ಆನೆಗೊಂದಿಯ ಪೂರ್ವಭಾಗದಲ್ಲಿ ದಕ್ಷಿಣೋತ್ತರವಾಗಿ ಪ್ರವಹಿಸಿರುವ ತುಂಗಭದ್ರಾನದಿಗೆ 'ಮಲಪ್ರಹಾರಿಣೀ ತೀರ್ಥ'ವೆಂದು ಹೆಸರು. (ಮಲ=ಕೊಳೆಯನ್ನು, ಪಾಪವನ್ನು ; ಪ್ರಹಾರಿಣೀ=ನಾಶಮಾಡುವಂಥಾದ್ದು).

ಇನ್ನು ಈ ನಡುಗಡ್ಡೆಯೂ ಸಹ ಪವಿತ್ರವಾದ ಪುಣ್ಯಕ್ಷೇತ್ರವೆಂಬುದಕ್ಕೂ ಅನೇಕ ನಿದರ್ಶನಗಳಿವೆ. ತ್ರೇತಾಯುಗದಲ್ಲಿ ಸಪ್ತಜನಾಶ್ರಮವಿದ್ದ ಸ್ಥಳವೂ ಅದಕ್ಕೂ ಹಿಂದೆ ಕೃತಯುಗದಲ್ಲಿ ಸತ್ಯವ್ರತರಾಜನಿದ್ದ ಕ್ಷೇತ್ರವೂ ಇದಾಗಿತ್ತೆಂದು ತಿಳಿದುಬಂದಿವೆ.

**ಇದಂ ಸತ್ಯವ್ರತಕ್ಷೇತ್ರಂ ಆಸನ್ನೇಽಮೃತದಾಯಕಮ್ |**
**ಯೋ ವಸೇದೇಕರಾತ್ರಂ ವಾ ಸ ಯಾತಿ ಪರಮಾಂ ಗತಿಮ್ ||**

ಎಂಬ ಸ್ಕಾಂದ ಪುರಾಣವಾಕ್ಯದಿಂದ ಇದು ಸತ್ಯವ್ರತರಾಜನ ಕ್ಷೇತ್ರವಾಗಿತ್ತೆಂದೂ ಇಲ್ಲಿ ಒಂದು ರಾತ್ರಿ ವಾಸಮಾಡುವುದರಿಂದಲೇ ಮನುಷ್ಯರಿಗೆ ಸದ್ಗತಿಯಾಗುವುದೆಂದೂ ತಿಳಿದು ಬರುತ್ತದೆ.

**ಸಪ್ತಜನಾಶ್ರಮ :** ವಾಲ್ಮೀಕಿರಾಮಾಯಣದ ಕಿಷ್ಕಿಂಧಾಕಾಂಡದ ೧೩ನೇ ಸರ್ಗದಲ್ಲಿ ಈ ಸಪ್ತ ಋಷಿಗಳ ಪ್ರಸಂಗ ಬಂದಿದೆ. ಇವರ ಕಥೆಯನ್ನು ಸುಗ್ರೀವ ರಾಮನಿಗೆ ಹೀಗೆ ವರ್ಣಿಸುವನು. ಏಳು ಜನ ಋಷಿಗಳು ಬಹಳ ಹಿಂದೆ ಈಗ ನವವೃಂದಾವನವಿರುವ ಬಳಿಯಲ್ಲಿ ನೀರಿನಲ್ಲಿ ತಲೆಕೆಳಕಾಗಿ ನಿಂತು ವಾರಕ್ಕೊಂದಾವರ್ತಿ ವಾಯುಭಕ್ಷಣೆ ಮಾಡಿಕೊಂಡು ಏಳು ನೂರು ವರ್ಷ ತಪಸ್ಸು ಮಾಡಿದ್ದರಿಂದ ಸಶರೀರರಾಗಿ ಸ್ವರ್ಗಾರೋಹಣ ಮಾಡಿದರು. ಭಾವಿತಾತ್ಮರಾದ ಅವರ ಸ್ಮರಣೆ ಮಾಡಿ ನಮಸ್ಕಾರ ಮಾಡುವವರಿಗೆ ಯಾವ ಅಶುಭವೂ ಆಗುವುದಿಲ್ಲವೆಂದೂ ಇಲ್ಲಿಯ ಗಡ್ಡೆ ಗೆಣಸು ಹಣ್ಣು ನೀರು ಎಲ್ಲವೂ ರುಚಿಯಾಗಿರುವುದೆಂದೂ (ಸ್ವಾದುಮೂಲಫಲೋದಕಮ್) ವರ್ಣಿಸಿದ್ದಾನೆ. ಆ ಸಪ್ತಜನಾಶ್ರಮವೇ ಈಗಿನ ನವವೃಂದಾವನ ಕ್ಷೇತ್ರವಾಗಿದೆಯೆಂಬುದು ಅನೇಕ ನಿದರ್ಶನಗಳಿಂದಲೂ ಭೌಗೋಲಿಕ ಸನ್ನಿವೇಶಗಳ ಪರ್ಯಾಲೋಚನೆಯಿಂದಲೂ ಗೊತ್ತಾಗುತ್ತದೆ.

## ಸಪ್ತಜನಾಶ್ರಮದ ಮೂಲಶ್ಲೋಕಗಳು

ತೇಷಾಂ ತು ಗಚ್ಛತಾಂ ತತ್ರ ತ್ವರಿತಂ ರಘುನಂದನಃ ।
ದ್ರುಮಷಂಡಂ ವನಂ ದೃಷ್ಟ್ವಾ ರಾಮಃ ಸುಗ್ರೀವಮಬ್ರವೀತ್ ॥ ೧೩ ॥

ಏಷ ಮೇಘ ಇವಾಕಾಶೇ ದ್ರುಮಷಂಡಃ ಪ್ರಕಾಶತೇ . . .
ಕಿಮೇತದ್ ಜ್ಞಾತುಮಿಚ್ಛಾಮಿ ಸಖೇ ಕೌತೂಹಲಂ ಹಿ ಮೇ ॥ ೧೫ ॥

ಸುಗ್ರೀವ ಉವಾಚ ।

ಏತದ್ರಾಘವ ವಿಸ್ತೀರ್ಣ—ಮಾಶ್ರಮಂ ಶ್ರಮನಾಶನಮ್
ಉದ್ಯಾನವನಸಂಪನ್ನಂ ಸ್ವಾದುಮೂಲಫಲೋದಕಮ್ ॥ ೧೭ ॥

ಅತ್ರ ಸಪ್ತಜನಾ ನಾಮ ಮುನಯಃ ಸಂಶ್ರಿತವ್ರತಾಃ ।
ಸಪ್ತೈವಾಸನ್ನಧಃಶೀರ್ಷಾ ನಿಯತಂ ಜಲಶಾಯಿನಃ ॥ ೧೮ ॥

ಸಪ್ತರಾತ್ರಕೃತಾಹಾರಾ ವಾಯುನಾ ಏನವಾಸಿನಃ ।
ದಿವಂ ವರ್ಷಶತೈರ್ಯಾತಾ ಸಪ್ತಭಿಃ ಸಕಲೇವರಾಃ ॥ ೧೯ ॥

ತೇಷಾಮೇವಂಪ್ರಭಾವಾನಾಂ . . . ಆಶ್ರಮಂ ಸುದುರಾಧರ್ಷಂ ... ॥ ೨೦ ॥

ವಿಭೂಷಣರವಾಸ್ತತ್ರ . ಶ್ರೂಯಂತೇ ಸಕಲಾಕ್ಷರಾಃ ।
ತೂರ್ಯಗೀತಸ್ವನಾಸ್ತತ್ರ ಗಂಧೋ ದಿವ್ಯಶ್ಚ ರಾಘವ ॥ ೨೧ ॥

ಕುರು ಪ್ರಣಾಮಂ ಧರ್ಮಾತ್ಮನ್ ತಾನ್ ಸಮುದ್ದಿಶ್ಯ ರಾಘವ ॥ ೨೫ ॥

ಪ್ರಣಮಂತಿ ಹಿ ಯೇ ತೇಷಾಂ ಮುನೀನಾಂ ಭಾವಿತಾತ್ಮನಾಮ್ ।
ನ ತೇಷಾಮಶುಭಂ ಕಿಂಚಿತ್ ಶರೀರೇ ರಾಮ ದೃಶ್ಯತೇ ॥ ೨೬ ॥

ತತೋ ರಾಮಃ ಸಹ ಭ್ರಾತ್ರಾ ಲಕ್ಷ್ಮಣೇನ ಕೃತಾಂಜಲಿಃ ।
ಸಮುದ್ದಿಶ್ಯ ಮಹಾತ್ಮಾನಸ್ ತಾನೃಷೀನಭ್ಯವಾದಯತ್ ॥ ೨೭ ॥

(ವಾಲ್ಮೀಕಿ ರಾಮಾಯಣೇ ಕಿಷ್ಕಿಂಧಾಕಾಂಡೇ ೧೩. ಸರ್ಗಃ)

ಹೀಗೆ ನವವೃಂದಾವನವು ಅಸದೃಶವಾದ ತಪೋಭೂಮಿಯೂ ಪುಣ್ಯತಮವಾದ ಕ್ಷೇತ್ರವೂ ಆಗಿದೆ. ಅಷ್ಟಲ್ಲದಿದ್ದರೆ, ಏನೋ ಸುಮ್ಮನೆ, ಇಂಥಾ ನವಯತಿವರೇಣ್ಯರು ಈ ಕ್ಷೇತ್ರವನ್ನು ತಮ್ಮ ಚಿರಂತನ ವಿಶ್ರಾಂತಿಗೆ—ಸಮಾಧಿಯೋಗಕ್ಕೆ—ತಕ್ಕ ಭೂಮಿಯೆಂದು ಆರಿಸಿಕೊಳ್ಳುತ್ತಿದ್ದರೇನು !

ನವವೃಂದಾವನದಲ್ಲಿ ಆರಾಧನೆಗಳು : ಯದ್ಯಪಿ ಇಲ್ಲಿ ಒಂಬತ್ತು ಯತಿಗಳು ನೆಲೆಸಿದ್ದರಾದರೂ ಎಲ್ಲ ಯತಿಗಳ ಆರಾಧನೆಗಳು ನಡೆಯುವುದಿಲ್ಲ. ೧೯೫೭ರ ವರೆಗೆ ಕೇವಲ ಮೂರೇ ಆರಾಧನೆಗಳು, ಕಾರ್ತಿಕಮಾಸದಲ್ಲೊಂದು ಫಾಲ್ಗುಣದಲ್ಲಿ ಎರಡು—ನಡೆಯುತ್ತಿದ್ದುವು. ಇತ್ತೀಚೆಗೆ ಇನ್ನೂ ಎರಡು ಆರಾಧನೆಗಳು ಚೈತ್ರದಲ್ಲಿ ನಡೆಯುತ್ತವೆ

ಗೋವಿಂದ ಒಡೆಯರ ಆರಾಧನೆ ವ್ಯಾಸರಾಯರ ಆರಾಧನೆಯ ಕಡೆಯ ದಿನವೇ ಆಗುವುದರಿಂದ ಅದರ ಜೊತೆಯೇ ನಡೆಯುವುದು. ಕಾರ್ತಿಕಮಾಸದಲ್ಲಿ ನಡೆಯುವ ಪದ್ಮನಾಭರ ಆರಾಧನೆಗೂ, ಫಾಲ್ಗುಣದಲ್ಲಿ ಒಟ್ಟಿಗೆ ಸಾಲಾಗಿ ನಡೆಯುವ ಮೂರು (ಸುಧೀಂದ್ರರು, ವ್ಯಾಸರಾಯರು, ಗೋವಿಂದ ಒಡೆಯರ) ಆರಾಧನೆಗಳಿಗೂ ಹೆಚ್ಚು ಜನ ಸೇರುವರು. ಮಾಸಕ್ರಮದಲ್ಲಿ ಚೈತ್ರ ಶುಕ್ಲ ನವಮೀ (ಶ್ರೀರಾಮನವಮೀ) ದಿನ ಕವೀಂದ್ರರ ಆರಾಧನೆ. (೨) ಚೈತ್ರ ಬಹುಳ (ವದ್ಯ) ತದಿಗೆ ವಾಗೀಶರದ್ದು. (೩) ವೈಶಾಖ ಕೃಷ್ಣ ಪಂಚಮೀ ಶ್ರೀನಿವಾಸತೀರ್ಥರದು. (೪) ಜೇಷ್ಠ ಕೃಷ್ಣ ತೃತೀಯಾ—ರಘುವರ್ಯರದು. (೫) ಆಶ್ವೀಜ ಶುಕ್ಲ ಚತುರ್ದಶೀ—ರಾಮತೀರ್ಥರದು. (೬) ಕಾರ್ತಿಕ ಕೃಷ್ಣ ಚತುರ್ದಶೀ—ಪದ್ಮನಾಭತೀರ್ಥರದ್ದು. (೭) ಫಾಲ್ಗುಣ ಬಹುಳ ಬಿದಿಗೆ—ಸುಧೀಂದ್ರತೀರ್ಥರದ್ದು. (೮) ಫಾಲ್ಗುಣ ಬಹುಳ ಚೌತಿ (ಮಧ್ಯ ಆರಾಧನೆ)—ವ್ಯಾಸರಾಯರದ್ದು. (ಫಾಲ್ಗುಣ ಬಹುಳ ಪಂಚಮೀ—ಗೋವಿಂದ ಒಡೆಯರ ಆರಾಧನೆ. ಪದ್ಮನಾಭತೀರ್ಥರ ಮತ್ತು ವ್ಯಾಸರಾಯರ ಆರಾಧನೆಗಳನ್ನು ಮೂರು ಮೂರು ದಿನ ಮಾಡುವ ವಾಡಿಕೆಯಿದೆ.

**ನಿಸರ್ಗ ಚಿಕಿತ್ಸಾಲಯ :** ಹೀಗೆ ನವವೃಂದಾವನವು ವೈಷ್ಣವ ಯಾತ್ರಾರ್ಥಿಗಳಿಗೆ ಪುಣ್ಯಕ್ಷೇತ್ರ ಮಾತ್ರವಾಗಿರುವುದಲ್ಲದೆ ಭೌಗೋಲಿಕ ಸನ್ನಿವೇಶದಿಂದ ಒಂದು ನಿಸರ್ಗ ಚಿಕಿತ್ಸಾಲಯವೇ ಆಗಿರುವುದು. ಇಲ್ಲಿಗೆ ದರ್ಶನಕ್ಕಾಗಿ ಬಂದಿದ್ದ ಆಧುನಿಕ ವೈದ್ಯ' ಪ್ರವೀಣರು ಅನೇಕರು ಇಲ್ಲಿಯ ವಾತಾವರಣಕ್ಕೆ ಮನಮೆಚ್ಚಿ ಇದರ ಮಹಿಮೆಯನ್ನು ವರ್ಣಿಸುತ್ತಾ—ಈ ಸ್ಥಳದ ಸನ್ನಿವೇಶವೂ ವಾತಾವರಣವೂ ಅತ್ಯಂತ ಪವಿತ್ರವೂ ನಿರ್ಮಲವೂ ಆಗಿರುವುದರಿಂದಲೂ, ಸುತ್ತಮುತ್ತ ಗದ್ದೆಗಳು–ತೋಟಗಳು ಇದ್ದು ಪೈರು–ಪಚ್ಚೆಗಳು ಗಿಡಮರಗಳು ಸೊಂಪಾಗಿ ಬೆಳೆದಿರುವುದರಿಂದಲೂ ನದಿಯ ಮೇಲೆ ಬೀಸಿಕೊಂಡು ಬರುವ ತಂಬೆಲರು ಅತ್ಯಂತ ಆರೋಗ್ಯಕರವಾಗಿರುವುದರಿಂದಲೂ, ಇಲ್ಲಿಯ ನೀರು ಗೆಡ್ಡೆ–ಗೆಣಸು ಹಣ್ಣುಹಂಪಲುಗಳೂ (ಸುಗ್ರೀವನೇ ರಾಮಾಯಣದಲ್ಲಿ ಹೇಳಿರುವಂತೆ) 'ಸ್ವಾದುಮೂಲ ಫಲೋದಕ'ವಾಗಿರುವುದರಿಂದಲೂ, "ನವವೃಂದಾವನವು ಕೇವಲ ತಪೋವನವಲ್ಲ, ಇದು Nature's Sanatorium (ನಿಸರ್ಗ ಚಿಕಿತ್ಸಾಲಯ). ಈ ಸ್ಥಳದಲ್ಲಿ ವಾಸಮಾಡಿದರೇ ಸಾಕು, ಕೇವಲ ಪ್ರಕೃತಿ ಚಿಕಿತ್ಸೆಯಿಂದಲೇ ಎಂತಹ ರೋಗವಾದರೂ ಗುಣವಾಗುತ್ತದೆ" ಎಂದು ಏಕಕಂಠದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹೀಗೆ ಒಟ್ಟಿನಲ್ಲಿ, ನವವೃಂದಾವನವು ವೈಷ್ಣವ ಯಾತ್ರಾರ್ಥಿಗಳಿಗೆ ಧಾರ್ಮಿಕ ದೃಷ್ಟಿಯಿಂದ ಆದರಣೀಯವಾದ ಪುಣ್ಯಭೂಮಿಯೂ ಆಧ್ಯಾತ್ಮಿಕ ಮಹತ್ವದ ಹಿನ್ನೆಲೆಯ ಹಿರಿಮೆಯುಳ್ಳ ಗುರು ಸ್ಥಾನವೂ ಆಗಿರುವುದಲ್ಲದೆ, ಈಗಿನ ಕಾಲದಲ್ಲಿ ದುರ್ಲಭವಾದ ಮೌನಧ್ಯಾನೋಪಾಸನೆಗೂ, ಪ್ರಶಾಂತ ಏಕಾಂತತೆಗೂ ಉತ್ತೇಜನಕವಾಗಿರುವ ನೈಸರ್ಗಿಕ ದೃಶ್ಯಗಳ ಸೊಬಗಿನಿಂದ ಕೂಡಿದ ಮನೋಹರ ಪ್ರದೇಶವೂ ಆಗಿದೆ.

# ನವಯತಿಗಳ ಧ್ಯಾನ ಶ್ಲೋಕಗಳು

## ೧. ಪದ್ಮನಾಭತೀರ್ಥರು (ಚರಮಶ್ಲೋಕ)

ಪೂರ್ಣಪ್ರಜ್ಞಕೃತಂ ಭಾಷ್ಯಂ ಆದೌ ತದ್ಭಾವಪೂರ್ವಕಮ್ ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥ ೧ ॥

ತತ್ತ್ವಪ್ರಕಾಶಿಕಾದಲ್ಲಿ ಜಯತೀರ್ಥರು (ಟೀಕಾರಾಯರು) ಮಾಡಿರುವ ಸ್ತುತಿ

ಶ್ರೀಮಧ್ವಸಂಸೇವನಲಬ್ಧಶುದ್ಧ-
ವಿದ್ಯಾಸುಧಾಂಭೋನಿಧಯೋಽಮಲಾ ಯೇ
ಕೃಪಾಲವಃ ಪಂಕಜನಾಭತೀರ್ಥಾಃ
ಕೃಪಾ-ಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥ ೨ ॥

ನ್ಯಾಯಸುಧಾಗ್ರಂಥದಲ್ಲಿ ಮಾಡಿರುವ ಸ್ತುತಿ

ರಮಾನಿವಾಸೋಚಿತವಾಸಭೂಮಿಃ
ಸನ್ನ್ಯಾಯರತ್ನಾವಳಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭ–
ತೀರ್ಥಾವ್ಯುತ್ಪಾಬ್ಧಿರ್ಭವತಾದ್ ವಿಭೂತ್ಯೈ ॥ ೩ ॥

ನ್ಯಾಯದೀಪಿಕಾದಲ್ಲಿ ಮಾಡಿರುವ ಸ್ತುತಿ

ಸ ಪದ್ಮನಾಭತೀರ್ಥಾರ್ಕ–ಗೋಗಣೋಽಸ್ತು ದೃಶೇ ಮಮ ।
ನ ತತ್ತ್ವಮಾರ್ಗೇ ಗಮನಂ ವಿನಾ ಯದುಪಜೀವನಮ್ ॥

ವ್ಯಾಸರಾಯರು ತಾತ್ಪರ್ಯಚಂದ್ರಿಕಾದಲ್ಲಿ ಮಾಡಿರುವ ಸ್ತುತಿ

ಶಾರದಾವಾಸವದನ—ಶಾರದಾಂಬುರುಹಾನ್ ಮುಹುಃ ।
ಪದ್ಮನಾಭಮುನೀನ್ ವಂದೇ ಸರ್ವಶಾಸ್ತ್ರವಿಶಾಸ್ತ್ರವಿಶಾರದಾನ್ ॥ ೫ ॥

## ೨. ಕವೀಂದ್ರರು (ಚರಮಶ್ಲೋಕ)

ವೀಂದ್ರಾರೂಢಪದಾಸಕ್ತಂ ರಾಜೇಂದ್ರಮುನಿಸೇವಿತಮ್ ।
ಶ್ರೀಕವೀಂದ್ರಮುನಿಂ ವಂದೇ ಭಜತಾಂ ಚಂದ್ರಸನ್ನಿಭಮ್ ॥

## ೩. ವಾಗೀಶರು (ಚರಮಶ್ಲೋಕ)

ವಾಸುದೇವಪದದ್ವಂದ್ವ—ವಾರಿಜಾಸಕ್ತಮಾನಸಮ್
ಪದವ್ಯಾಖ್ಯಾನಕುಶಲಂ ವಾಗೀಶಯತಿಮಾಶ್ರಯೇ ॥

## ೪. ಶ್ರೀ ವ್ಯಾಸರಾಯರು (ಚರಮಶ್ಲೋಕ)

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾತ್ ಅಸ್ಮದಿಷ್ಟಾರ್ಥಸಿದ್ಧಯೇ ॥ ೧ ॥

ಮಂತ್ರಾಲಯದ ರಾಯರು—ಪರಿಮಳಗ್ರಂಥದಲ್ಲಿ

ಪದವಾಕ್ಯಪ್ರಮಾಣಜ್ಞೋ ದುರ್ಮತಧ್ವಾಂತಭಾಸ್ಕರಃ ।
ವ್ಯಾಸತೀರ್ಥಮುನೀಂದ್ರೋ ಮೇ ಭಯಾದ್ ಜ್ಞಾನಸಮೃದ್ಧಯೇ ॥ ೨ ॥

ಚಂದ್ರಿಕಾಪ್ರಕಾಶದಲ್ಲಿ ರಾಯರು ಮಾಡಿರುವ ಸ್ತೋತ್ರ

ಪದವಾಕ್ಯಪ್ರಮಾಣಜ್ಞಾನ್ ಸಂಪ್ರದಾಯಾರ್ಥಕೋವಿದಾನ್ ।
ವ್ಯಾಸತೀರ್ಥಮುನೀನ್ ಸೇವೇ ದುರ್ವಾದಿಘಣಪಕ್ಷಿಪಾನ್ ॥ ೩ ॥

## ೫. ರಘುವರ್ಯರು (ಚರಮಶ್ಲೋಕ)

ಮಹಾಪ್ರವಾಹಿನೀ ಭೀಮಾ ಯಸ್ಯ ಮಾರ್ಗಮದಾನ್ಮುದಾ ।
ರಘುವರ್ಯೋಽ ಮುದಂ ದದ್ಯಾತ್ ಕಾಮಿತಾರ್ಥಪ್ರದಾಯಕಃ ॥

## ೬. ಶ್ರೀನಿವಾಸತೀರ್ಥರು

ಯದುನಾಥಪದಾಂಭೋಜ—ಸಂಸಕ್ತೋ ಹಂಸರಾಣ್ಮುದೇ ।
ಶ್ರೀನಿವಾಸಗುರುರ್ಭೂಯಾದ್ ವಾಸವೀಸೂನುಪೂಜಕಃ ॥

## ೭. ರಾಮತೀರ್ಥರು

ರಾಮತೀರ್ಥಗುರುಂ ವಂದೇ ರಾಮಪಾದಾಬ್ಜಭಾಜಕಮ್ ।
ಸಮಜ್ಞಾಸ ಧರೇಶಾನಾಂ ರಾಮಪಾರಮ್ಯಸಾಧಕಮ್ ॥

## ೮. ಸುಧೀಂದ್ರತೀರ್ಥರು

ಕಂಶಾಗ್ರಮತಯೇ ಭಾನು—ದ್ಯುತಯೇ ವಾದಿಭೀತಯೇ
ಆರಾಧಿತಶ್ರೀಪತಯೇ ಸುಧೀಂದ್ರಯತಯೇ ನಮಃ ॥

## ೯. ಗೋವಿಂದ ಒಡೆಯರು

(ಇವರ ಬಗ್ಗೆ ಯಾವ ಧ್ಯಾನಶ್ಲೋಕಗಳೂ ಉಪಲಭ್ಯವಾಗಿಲ್ಲವಾದ ಕಾರಣ ನಾನೇ ಈ ಶ್ಲೋಕವನ್ನು ರಚಿಸಿ ಧ್ಯಾನಿಸುತ್ತಾ ಬಂದಿದ್ದೇನೆ—ಎ.ಶೀ.)

ತುಂಗಭದ್ರಾಸರಿತ್ತೀರೇ ಚರಂತಂ ದುಶ್ಚರಂ ತಪಃ ।
ವಂದೇ ಗೋವಿಂದನಾಮಾನಂ ಯತಿಂ ಜ್ಞಾನಸಮೃದ್ಧಯೇ ॥

ವಿಷ್ಣುತೀರ್ಥರ ಚರಮ ಶ್ಲೋಕ

ವ್ಯಾಸರಾಜಪದಾಸಕ್ತಮ್ । ನವವೃಂದಾವನೇ ಸ್ಥಿತಮ್ ॥
ಸಜ್ಜನೋದ್ಧಾರಕಂ ಭಜೇ । ವಿಷ್ಣುತೀರ್ಥಮಹರ್ನಿಶಂ ॥

- ಮ । ಶಾ । ಸಂ । ಪಿ. ವಿನಯಾಚಾರ್
ಬೆಂಗಳೂರು - 10.

ಈ ಲೇಖಕರಿಂದ ಬರೆಯಲ್ಪಟ್ಟು
ಗದ್ಯದಲ್ಲೇ ಮುದ್ರಿತವಾಗಿ ಪ್ರಕಟವಾಗಲಿರುವ ಗ್ರಂಥ

# ಪುರುಷಸೂಕ್ತ ವ್ಯಾಖ್ಯಾನ

(ಏಳು ಸಂಸ್ಕೃತ ವ್ಯಾಖ್ಯಾನಗಳ
ಮೂಲ ಮತ್ತು ಕನ್ನಡ ವಿವರಣೆಗಳ ಸಮೇತ)

ಇದರಲ್ಲಿ ಹಿಂದೆ ೧೯೧೫ರಲ್ಲಿ ಮೈಸೂರು ಜಯಾಲಯ ಪ್ರೆಸ್ಸಿನಲ್ಲಿ ಮುದ್ರಿತವಾದ ಶ್ರೀರಾಘವೇಂದ್ರ ಸ್ವಾಮಿಗಳ ಮತ್ತು ಶ್ರೀ ಸತ್ಯಸಂಧತೀರ್ಥರ ಸಂಸ್ಕೃತ ವ್ಯಾಖ್ಯಾನಗಳೂ ಅಲ್ಲದೆ ಇದುವರೆಗೆ ಅಪ್ರಕಾಶಿತವಾದ ಇನ್ನೊಂದು ಮಾಧ್ವ ವ್ಯಾಖ್ಯಾನವೂ ಸಂಪೂರ್ಣವಾಗಿ ಕೊಡಲ್ಪಟ್ಟಿದೆ. ಜೊತೆಗೆ ಶ್ರೀ ವಾದಿರಾಜಸ್ವಾಮಿಗಳ ಮತ್ತು ಶ್ರೀ ಸತ್ಯಾಭಿನವ ತೀರ್ಥರ ವ್ಯಾಖ್ಯಾನಗಳ ಮುಖ್ಯ ಮುಖ್ಯಾಂಶಗಳನ್ನು ಪ್ರತಿಯೊಂದು ಋಕ್ಕಿಗೂ ಸಂಗ್ರಹಿಸಿ ಕೊಡಲಾಗಿದೆ. ಹಾಗೆಯೇ ಅದ್ವೈತ ಪರವಾದ ಸಾಯಣ ಭಾಷ್ಯವೂ, ವಿಶಿಷ್ಟಾದ್ವೈತಪರವಾದ ರಂಗರಾಮಾನುಜೀಯ ವ್ಯಾಖ್ಯಾನವೂ (ಸಂಸ್ಕೃತ ಮೂಲ) ಸೇರಿಸಲ್ಪಟ್ಟಿವೆ. ಜೊತೆಗೆ ಸಂಸ್ಕೃತ ವ್ಯಾಖ್ಯಾನಗಳೆಲ್ಲದರ ಕನ್ನಡಾನುವಾದವೂ ವಿಸ್ತಾರವಾದ ತಾತ್ಪರ್ಯ ವಿವರಣೆಗಳೂ ಸಿಂಹಾವಲೋಕನಗಳೂ ಸೇರಿರುವುದರಿಂದ ಪಂಡಿತ-ಪಾಮರರು ಆಬಾಲವೃದ್ಧಾದಿ ಎಲ್ಲರಿಗೂ ವ್ಯಾಖ್ಯಾನಗಳ ಅರ್ಥವು ಸುಗಮವಾಗಿ ತಿಳಿಯುವಂತಿದೆ. ಇವುಗಳ ಜೊತೆ ಮಹಾ ಮಹೋಪಾಧ್ಯಾಯ ಸ್ವ ಶ್ರೀಮುಷ್ಣ ಸೇತು ಮಾಧವಾಚಾರ್ಯರ ಪುರುಷಸೂಕ್ತದ ಕನ್ನಡ ಅರ್ಥ-ತಾತ್ಪರ್ಯಗಳನ್ನೂ, ವಿಶೇಷಾಂಶಗಳನ್ನೂ ಸಂಪೂರ್ಣವಾಗಿ ಕೊಡಲಾಗಿದೆ.

ವಿಷ್ಣುತೀರ್ಥ
'ನವವೃಂದಾವನ,'
೯೩೧, ಎರಡನೇ ಬೀದಿ, ನಾಲ್ಕನೇ ಬ್ಲಾಕ್
ರಾಜಾಜಿ ನಗರ, ಬೆಂಗಳೂರು—೫೬೦೦೧೦
ಫೋನ್ ನಂ. 23143290

॥ ಶ್ರೀ ಕೃಷ್ಣಾರ್ಪಣ ಮಸ್ತು ॥

# ನಮ್ಮ ಇತರ ಪ್ರಕಟನೆಗಳು

೧. ಪಂಪಾಮಾಹಾತ್ಮ್ಯ (ಸ್ಕಾಂದಪುರಾಣೋಕ್ತ)ದ ಕನ್ನಡ ಸಂಗ್ರಹಾನುವಾದ

೨. ಹಂಪೆ, ವಿಜಯನಗರ ಮತ್ತು ಕಿಷ್ಕಿಂಧಾನಗರಗಳ ಮಾರ್ಗದ ಕೈಪಿಡಿ (ಐದನೇ ಮುದ್ರಣ)

೩. ಚಿತ್ರಗಳಲ್ಲಿ ಪಂಪಾಕ್ಷೇತ್ರ (ಪಂಪಾಕ್ಷೇತ್ರದ ಹಾಗೂ ಹಾಳು ಹಂಪೆಯ ಚಿತ್ರಗಳ ಸುಂದರ ಸಂಗ್ರಹ) (ಎರಡನೇ ಮುದ್ರಣ)

೪. ಶ್ರೀಹರಿವಾಯುಸ್ತುತಿಯ ಪ್ರಥಮ ಭಾಗವಾದ ಸಖಿಸ್ತುತಿಯ ವಿವರಣೆ (ಸುಮಾರು ೩೫೦ ಪುಟಗಳು)

(ಈ ಎಲ್ಲ ಪುಸ್ತಕಗಳೂ ಮುಗಿದು ಹೋಗಿರುವುದರಿಂದ ಈಗ ಉಪಲಭ್ಯವಿಲ್ಲ.)

| | | |
|---|---|---|
| ೧. | ಶ್ರೀ ಹರಿವಾಯುಸ್ತುತಿ–೨ನೇ ಭಾಗ (ಮೊದಲ ಇಪ್ಪತ್ತೊಂದು ಶ್ಲೋಕಗಳ—ಹನುಮದವತಾರದ ಪೂರ್ತಿ–ವಿವರಣೆ | ೬೦–೦೦ |
| ೨. | ಶ್ರೀಹರಿವಾಯುಸ್ತುತಿ – ೩ನೇ ಭಾಗ(ಭೀಮ – ಮಧ್ವಾವತಾರಗಳ ವರ್ಣನೆ–ಕಡೆಯ ಇಪ್ಪತ್ತು ಶ್ಲೋಕಗಳ ವಿವರಣೆ) | ೬೦–೦೦ |
| ೩. | ಖಿಲವಾಯುಸ್ತುತಿ–ಬಳಿತ್ಥಾ ಸೂಕ್ತದ ವಿಸ್ತೃತ ವಿವರಣೆ ಸಹಿತ (ನಾಲ್ಕನೇ ಭಾಗ) | ೨೫–೦೦ |
| ೪. | ಶ್ರೀ ರಾಘವೇಂದ್ರ ಸ್ವಾಮಿಗಳ ಸರ್ವಸಮರ್ಪಣ ಗದ್ಯ–ಕನ್ನಡದಲ್ಲಿ ವಿಸ್ತಾರವಾದ ವಿವರಣೆ ಸಹಿತ | ೮–೦೦ |
| ೫. | ನರಸಿಂಹಸುಳಾದಿ, ದುರ್ಗಾಸುಳಾದಿ ಮತ್ತು ಧನ್ವಂತರಿ ಸುಳಾದಿ (ಐದನೇ ಸಂಸ್ಕರಣ) ಕನ್ನಡಲಿಪಿ ಪಾಕೇಟ್ ಸೈಜ್ | ೨–೦೦ |
| ೬. | ಅದೇ ದೇವನಾಗರಿ ಲಿಪಿಯಲ್ಲಿ | ೩–೦೦ |
| ೭. | ಮುನಿತ್ರಯ ಸುಳಾದಿ (ಶ್ರೀವಾದಿರಾಜರ, ವ್ಯಾಸರಾಯರ ಮತ್ತು ರಾಘವೇಂದ್ರ ಸ್ವಾಮಿಗಳ ಸುಳಾದಿ) (ಮೂರನೇ ಮುದ್ರಣ) | ೨–೦೦ |
| ೮. | ಅದೇ ದೇವನಾಗರಿಲಿಪಿಯಲ್ಲಿ | ೨–೦೦ |
| ೯. | ಗುರುಮಂತ್ರ (ಗಂಡಸರಿಗೆ ಹೆಂಗಸರಿಗೆ ಬೇರೆ ಬೇರೆ ಪ್ರತಿಗಳು) | ೧–೦೦ |
| ೧೦. | ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸಗಳ ವಿವರಣೆ (ಸ್ವಲ್ಪ ಪ್ರತಿಗಳು ಮಾತ್ರ ಉಳಿದಿವೆ.) | ೧೫–೦೦ |
| ೧೧. | ಪಂಚಮುಖಿ ಹನುಮತ್‌ಕವಚ ಸ್ತೋತ್ರ ಮತ್ತು ಮುಖ್ಯ ಪ್ರಾಣಾಭಿಷೇಕವಿಧಿ (ಕ್ರೌನ್ ೧/೧೬) | |
| ೧೨. | ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಲಕ್ಷಣ | |
| ೧೩. | ಯಜ್ಞೋಪವೀತ ಪ್ರತಿಷ್ಠಾ | |
| ೧೪. | ನೈವೇದ್ಯ ಸಮರ್ಪಣ ಸುಳಾದಿ | |
| ೧೫. | ದೇವಪೂಜೆ | |
| ೧೬. | ಪುರುಷಸೂಕ್ತ (ಮೂರು ಭಾಗಗಳಲ್ಲಿ) | |
| ೧೭. | ಮಂತ್ರೋದ್ಧಾರಕರು ಮತ್ತು ನವವೃಂದಾವನ (ಮೂರನೇ ಮುದ್ರಣ) | |

## ಇವರಲ್ಲೂ ಈ ಪ್ರತಿಗಳು ದೊರಕುವುವು

**ಪಿ. ಶ್ರೀನಿವಾಸ ರಾವ್**

ನಂ. 931, 'ವಿಪ್ರಶ್ರೀ', ಮೊದಲನೇ ಮಹಡಿ, 2ನೇ ಮುಖ್ಯರಸ್ತೆ,
4ನೇ ವಿಭಾಗ, ರಾಜಾಜಿನಗರ, ಬೆಂಗಳೂರು – 560 010.
ಫೋನ್ ನಂ.: 23143290

**ವೇದಾಂತ ಬುಕ್ ಹೌಸ್**

ಉಮಾ ಟಾಕೀಸ್ ಬಳಿ, ಚಾಮರಾಜಪೇಟೆ, ಬೆಂಗಳೂರು – 560 010.

**ಶ್ರೀ ನಾರಾಯಣಾಚಾರ್ ಪೂಜಾ ಭಂಡಾರ್**

ನಂ. 56, ಶ್ರೀ ರಾಮ ದೇವಸ್ಥಾನದ ಕಟ್ಟಡ, 1ನೇ ಅಡ್ಡರಸ್ತೆ,
ಮಾಡೆಲ್ ಹೌಸ್ ಬೀದಿ, (ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಸಮೀಪ)
ನ.ರಾ. ಕಾಲೋನಿ, ಬೆಂಗಳೂರು – 560 019.
ಫೋನ್ : 26610600